SUPPORTING CHILDREN'S WRITING IN EARLY GRADES

early literacy initiative

भविष्य की पुनर्कल्पना RE-IMAGINING FUTURES
TISS

# ಆರಂಭಿಕ ತರಗತಿಗಳಲ್ಲಿ ಮಕ್ಕಳ ಬರವಣಿಗೆಯನ್ನು ಬೆಂಬಲಿಸುವುದು

# ಆರಂಭಿಕ ತರಗತಿಗಳಲ್ಲಿ ಮಕ್ಕಳ ಬರವಣಿಗೆಯನ್ನು ಬೆಂಬಲಿಸುವುದು

**ಮುಖಚಿತ್ರ 1**



**ಚಿತ್ರ-1: ಮಧ್ಯಪ್ರದೇಶದ ಸಕದ್‌ನಲ್ಲಿ ಇರುವ ಆದರ್ಶಿಲಾ ಕಲಿಕಾ ಕೇಂದ್ರದ ಮಕ್ಕಳು ಬರವಣಿಗೆ ಮತ್ತು ಚಿತ್ರರಚನೆಯಲ್ಲಿ ಮುಳುಗಿರುವುದು.**

ಮಧ್ಯಪ್ರದೇಶದ ಆದಿವಾಸಿ ಹಳ್ಳಿಯೊಂದರ ಎರಡನೇ ವರ್ಗದ ಭಾಷಾ ತರಗತಿಯೊಂದರಲ್ಲಿ ಶಿಕ್ಷಕಿಯು ಅವಳ ವಿದ್ಯಾರ್ಥಿಗಳ ಜೊತೆ ವೃತ್ತಾಕಾರದಲ್ಲಿ ಕುಳಿತು, ಅವರು ಹಿಂದಿನ ದಿನ ಹೋಗಿದ್ದ ಮದುವೆಯ ಬಗ್ಗೆ ಮಾತನಾಡುತ್ತಿದ್ದಾರೆ. ಗ್ರಾಮದ ಮದುವೆಗಳು ಸಮುದಾಯದ ವ್ಯವಹಾರಗಳಾಗಿವೆ. ಎಲ್ಲರನ್ನೂ ಆಹ್ವಾನಿಸಲಾಗುತ್ತದೆ. ಗ್ರಾಮದಲ್ಲಿ ಮದುವೆ ನಡೆದ ಪ್ರತಿ ಬಾರಿಯೂ, ಈ ವಸತಿ ಶಾಲೆಯ ಹೆಚ್ಚಿನ ಮಕ್ಕಳು ಸಂಭ್ರಮ ಆಚರಣೆಗಳಿಗಾಗಿ ಬೆಟ್ಟದ ಬುಡಕ್ಕೆ ಓಡುವುದನ್ನು ನೀವು ನೋಡುತ್ತೀರಿ. ಯಾರನ್ನೂ ತಿರುಗಿ ಕಳಿಸುವುದಿಲ್ಲ. ಡ್ರಮ್ ಗಳ ನಾದಕ್ಕೆ ನರ್ತಿಸುವ ಗಂಡಸರು ಮತ್ತು ಹೆಂಗಸರ ವರ್ತುಲಗಳು ಒಂದರೊಳಗೊಂದು ಸೇರಿಕೊಳ್ಳುತ್ತವೆ. ಕೊನೆಯಲ್ಲಿ, ನೆಲದಲ್ಲಿ ಸಾಲಾಗಿ ಕುಳಿತ ಅತಿಥಿಗಳಿಗೆ ಊಟವನ್ನು ಬಡಿಸಲಾಗುತ್ತದೆ. ಸಾಮಾನ್ಯವಾಗಿ ಪ್ರತೀ ಕುಟುಂಬದ ಶಕ್ತ್ಯಾನುಸಾರ ಅನ್ನ ಮತ್ತು ಕುರಿಯ ಮಾಂಸದ ಕರಿ, ಅಥವಾ ಅನ್ನ ಮತ್ತು ಬೇಳೆಯ ಪದಾರ್ಥ ಎರಡರಲ್ಲಿ ಒಂದನ್ನು ಮಾಡಲಾಗುತ್ತದೆ. ಹೊಟ್ಟೆ ತುಂಬಾ ಊಟ ಮಾಡಿದ ನಂತರ ಮಕ್ಕಳು ಶಾಲೆಗೆ ಹಿಂತಿರುಗುತ್ತಾರೆ.

ಸಂಭಾಷಣೆಯ ಸಮಯದಲ್ಲಿ ವಿವಿಧ ವಿವರಗಳು ಮಕ್ಕಳ ಬಾಯಿಂದ ಹೊರಬೀಳುತ್ತವೆ. ಊಟದ ಬಗ್ಗೆ, ಹಾಡುಗಳ ಬಗ್ಗೆ ಹೀಗೆ. ಮಕ್ಕಳು ತಮ್ಮ ಅನುಭವಗಳ ಬಗ್ಗೆ ಬರೆಯಲು ಬಯಸುತ್ತಾರೆಯೇ ಎಂದು ಶಿಕ್ಷಕಿಯು

ಮಕ್ಕಳನ್ನು ಕೇಳುತ್ತಾಳೆ. ಅವಳು ಕೇಂದ್ರದಲ್ಲಿನ ಹಾಳೆಗಳು, ಪೆನ್ಸಿಲ್ ಬಾಕ್ಸ್‌ಗಳು, ಬಣ್ಣಗಳು ಮತ್ತು ಇತರ ಲೇಖನ ಸಾಮಗ್ರಿಗಳನ್ನು ಹೊರತರುತ್ತಾಳೆ. 'ಹಾಳೆಯ ಮೇಲೆ ದಿನಾಂಕ ಮತ್ತು ನಿಮ್ಮ ಹೆಸರನ್ನು ಬರೆಯಿರಿ' ಎಂದು ಸೂಚಿಸುತ್ತಾಳೆ.

ಶಿಕ್ಷಕಿಯೂ ಸೇರಿದಂತೆ ಎಲ್ಲರೂ ಬರೆಯುತ್ತಾರೆ. ಸ್ವಲ್ಪ ಸಮಯದ ನಂತರ, ಶಿಕ್ಷಕಿಯು ತರಗತಿಯ ಸುತ್ತಲೂ ಓಡಾಡುತ್ತಾಳೆ. ಮಕ್ಕಳು ಬರವಣಿಗೆಯ ಚಟುವಟಿಕೆಯಲ್ಲಿ ಮುಳುಗಿದ್ದಾರೆ, ಪ್ರತಿಯೊಬ್ಬರೂ ಅವರದೇ ರೀತಿಯಲ್ಲಿ. ಕೆಲವರು ತಮ್ಮ ಅನುಭವಗಳ ಚಿತ್ರ ಬಿಡಿಸುತ್ತಾ ಮತ್ತು ಬಣ್ಣ ಹಚ್ಚುತ್ತಿದ್ದಾರೆ. ಇನ್ನೂ ಕೆಲವರು ಗೀಚುತ್ತಿದ್ದಾರೆ. ಹಾಗೆಯೇ ಮತ್ತೆ ಕೆಲವರು ಚಿತ್ರ ಮತ್ತು ವಿವರಣೆಯ ನಡುವೆ ಸಮಸ್ಥಿತಿಯನ್ನು ಕಾಯ್ದುಕೊಳ್ಳುತ್ತಿದ್ದಾರೆ.

*ಶಿಕ್ಷಕಿಯು ಪ್ರತಿ ಮಗುವಿನ ಬರವಣಿಗೆಯ ಬಗ್ಗೆ ಮಾತನಾಡುತ್ತಿದ್ದಾಳೆ, ಆಕೆಯ ಅಭಿಪ್ರಾಯ ಸೂಚಿಸುತ್ತಾ, ಪ್ರಶ್ನಿಸುತ್ತಾ, ಸಲಹೆಗಳನ್ನು ನೀಡುತ್ತಿದ್ದಾಳೆ.*

*ನಿನ್ನ ರಚನೆಗೆ ಶೀರ್ಷಿಕೆ ನೀಡಿಲ್ಲ ಎಂಬುದನ್ನು ನಾನು ನೋಡುತ್ತಿದ್ದೇನೆ. ನೀನು ಅದನ್ನು ಏನೆಂದು ಹೆಸರಿಸಲು ಬಯಸುತ್ತೀಯ?*

*ನಿನ್ನ ಚಿತ್ರದಲ್ಲಿರುವ ಈ ಜನರು ಯಾರು?*

*ನೀನು 'ಮದುವೆ' ಪದವನ್ನು ಬರೆಯಲು ಬಯಸುತ್ತಿದ್ದೀಯೆ ಎಂಬುದನ್ನು ನಾನು ನೋಡುತ್ತಿದ್ದೇನೆ. ಪದದ ಗೋಡೆಯ ಮೇಲೆ ಇರುವ ಅದರ ಕಾಗುಣಿತವನ್ನು ನೋಡಿ ನಿನ್ನದು ಸರಿ ಇದೆಯೆ ಎಂದು ನೋಡುತ್ತೀಯಾ?*

*ಮದುವೆಯಲ್ಲಿ ನೀನೇನು ಮಾಡಿದೆ ಎನ್ನುವ ವಿವರಗಳನ್ನು ನೀಡಲು ಇಚ್ಛಿಸುವೆಯಾ, ಅಂದರೆ ನೀನು ಏನನ್ನು ಧರಿಸಿದ್ದೆ ಅಥವಾ ತಿಂದೆ ಎಂದು?*

ಮಕ್ಕಳು ಬರೆದಿದ್ದೆಲ್ಲಾ ಮುಗಿದ ಮೇಲೆ ತಾವು ಬರೆದಿದ್ದನ್ನು ಶಿಕ್ಷಕಿಗೆ ತೋರಿಸಲು ಒಬ್ಬೊಬ್ಬರೇ ಅವಳ ಬಳಿ ಹೋಗುತ್ತಾರೆ. ಕೆಲವು ಮಕ್ಕಳು ತಾವು ಬರೆದ ಚಿತ್ರವನ್ನು ವಿವರಿಸುತ್ತಾರೆ. ಅವರಿಗೆ ಬರಹಗಾರಳಾಗಿ ಆಕೆ ಅದನ್ನು ಅವರ ಹಾಳೆಯ ಕೆಳಗಿನ ಭಾಗದಲ್ಲಿ ಬರೆಯುತ್ತಾಳೆ.

ಬಾಲ್ಯದಲ್ಲಿ ನಿಮಗೆ ಬರೆಯಲು ಹೇಗೆ ಕಲಿಸಲಾಯಿತು ಎಂದು ಯೋಚಿಸಿ. ಈ ಕಿರು ಮುಖಚಿತ್ರವನ್ನು ಬರೆಯಲು ಕಲಿಯುವಾಗಿನ ನಿಮ್ಮ ಅನುಭವಗಳಿಗೆ ಸಂಬಂಧ ಕಲ್ಪಿಸಬಹುದೇ? ಬಹುಶಃ ಇಲ್ಲ; ಭಾರತದ ತರಗತಿಗಳಲ್ಲಿ ಬೋಧನೆ–ಕಲಿಕೆಯ ಇಂತಹ ಪ್ರಸಂಗಗಳು ಬಹಳ ಅಪರೂಪ, ಇಲ್ಲಿ ಆರಂಭಿಕ ತರಗತಿಗಳಲ್ಲಿ ಅಕ್ಷರಗಳ ಅಥವಾ ಕಾಗುಣಿತಗಳ ಮತ್ತು ಪದಗಳ ಕಲಿಕೆಗೆ ಒತ್ತು ನೀಡಲಾಗುವುದು.

ಮೌಖಿಕ ಭಾಷೆಯ ಸಮೃದ್ಧ ಸಂಗ್ರಹ ಮತ್ತು ಅನುಭವಗಳಿಂದ ಬರುವ ಚಿಕ್ಕ ಮಗುವಿಗೆ ಅಕ್ಷರ ಮತ್ತು ಶಬ್ದಗಳನ್ನು ಬಾಯಿಪಾಠದಿಂದ ಕಲಿಯುವುದಕ್ಕೆ ಗಮನ ನೀಡುವುದು ಆಸಕ್ತಿರಹಿತ ಮತ್ತು ಅಪ್ರಸ್ತುತವೆಂದು ತೋರುತ್ತದೆ. ಬರವಣಿಗೆಯು ತಮ್ಮನ್ನು ವ್ಯಕ್ತಪಡಿಸಿಕೊಳ್ಳಲು ಮತ್ತು ಇತರರಿಗೆ ತಮ್ಮ ಕಲ್ಪನೆಗಳನ್ನು ಸಂವಹಿಸಲು ಉಪಯೋಗಕಾರಿ ಮತ್ತು ಆಸಕ್ತಿದಾಯಕ ಮಾರ್ಗ ಎಂದು ಕಾಣುವುದಕ್ಕಾಗಿ ಮಕ್ಕಳಿಗೆ ನಾವು ಹೇಗೆ ಸಹಾಯ ಮಾಡಬಲ್ಲೆವು? ಮಕ್ಕಳು ಎಲ್ಲ 'ಅಕ್ಷರಗಳನ್ನು' ಚೆನ್ನಾಗಿ ಕಲಿತು, ಆಮೇಲೆ ಪದಗಳನ್ನು, ವಾಕ್ಯಗಳು ಮತ್ತು ವಾಕ್ಯಖಂಡಗಳನ್ನು ಕಲಿತು ಅರ್ಥಪೂರ್ಣವಾಗಿ ಬರೆಯುವುದನ್ನು ಕಲಿಯುವ ಮುಂಚೆಯವರೆಗೂ ಕಾಯುವ ಅವಶ್ಯಕತೆ ಇದೆಯೇ? ಇಲ್ಲ, ಎಂದು ನಾವು ವಾದಿಸುತ್ತೇವೆ.

ಪ್ರಾರಂಭದಿಂದಲೇ ಮಕ್ಕಳನ್ನು ಅಭಿವ್ಯಕ್ತಿಗಾಗಿ ಮತ್ತು ಸಂವಹನಕ್ಕಾಗಿ ಬರೆಯಲು ಪ್ರೋತ್ಸಾಹಿಸಬೇಕು. ಉದಯೋನ್ಮುಖ ಸಾಕ್ಷರತೆಯ ಕ್ಷೇತ್ರದಲ್ಲಿನ ಕೆಲಸದಿಂದ ನಮಗೆ ತಿಳಿಯುವುದೇನೆಂದರೆ, ಸಂವಹನ ಮಾಡುವ ಪ್ರಯತ್ನದಲ್ಲಿ ಮಕ್ಕಳು ಚಿತ್ರ, ಮಾತುಕತೆ ಮತ್ತು ಕಾಲ್ಪನಿಕ ಕಾಗುಣಿತಗಳನ್ನು ಹೆಣೆಯುವ ಮೂಲಕ

ಬರವಣಿಗೆಯ ಜಗತ್ತನ್ನು ಪ್ರವೇಶಿಸುತ್ತಾರೆ[1]. ಅವರು ವಯಸ್ಕರು ಅಥವಾ ಹಿರಿಯ ಮಕ್ಕಳಂತೆ ಪರಿಪೂರ್ಣವಾಗಿ ಬರೆಯಲು ಸಾಧ್ಯವಾಗದಿದ್ದರೂ ಸಹ ಲಿಖಿತ ಮಾಧ್ಯಮದ ಮೂಲಕ ವಿವಿಧ ವಿಚಾರಗಳನ್ನು ವ್ಯಕ್ತಪಡಿಸುತ್ತಾರೆ. ಸರಿಯಾದ ಕಾಗುಣಿತ ಮತ್ತು ಕೈ ಬರವಣಿಗೆಯನ್ನು ಮೊದಲು ಕರಗತ ಮಾಡಿಕೊಳ್ಳಬೇಕೆಂದು ನಿರೀಕ್ಷಿಸುವುದರ ಬದಲು, ಶಿಕ್ಷಕರು ಸಂವಹನಕ್ಕಾಗಿ ಬರವಣಿಗೆಯನ್ನು ಪ್ರಯೋಗಿಸಲು ಸುರಕ್ಷಿತ, ಸಮರ್ಥಿಸುವಂಥ ವಾತಾವರಣವನ್ನು ಒದಗಿಸಬಹುದು.

ವಿವಿಧ ಉದ್ದೇಶಗಳಿಗಾಗಿ ಮಕ್ಕಳಲ್ಲಿ ಬರೆಯುವ ಆಸಕ್ತಿಯನ್ನು ಬೆಳೆಸಲು ನಾವು ಬಯಸಿದರೆ, ಯಾವ ಪ್ರಮುಖ ತತ್ತ್ವಗಳು ನಮ್ಮ ಸೂಚನೆಗಳಿಗೆ ಮಾರ್ಗದರ್ಶಿಯಾಗುತ್ತವೆ? ಅರ್ಥಪೂರ್ಣವಾಗಿ ಬರೆಯಲು ಮಕ್ಕಳು ಸಮೃದ್ಧ ಕಲಿಕಾ ಪರಿಸರದಲ್ಲಿ ಮುಳುಗಿದಾಗ, ಅದು ಅರ್ಥಪೂರ್ಣ ಬರವಣಿಗೆಗೆ ಸಾಕಷ್ಟು ಅವಕಾಶವನ್ನು ನೀಡುತ್ತದೆ. ಅದು ಮುದ್ರಣ ಸಮೃದ್ಧ ಪರಿಸರ, ಸಾಹಿತ್ಯಕ್ಕೆ ಪರಿಚಯಗೊಳ್ಳುವುದು, ಹಿಡಿದಿಟ್ಟುಕೊಳ್ಳುವಂಥ ತರಗತಿಯ ಸಂಭಾಷಣೆಗಳು, ಚಿತ್ರಬಿಡಿಸಲು ಅವಕಾಶಗಳನ್ನು ಒಳಗೊಂಡಿದೆ.

ಈ ಕೈಪಿಡಿಯ ಭಾಗ–ಎ ಈ ತತ್ತ್ವಗಳನ್ನು ವಿವರಿಸುತ್ತದೆ. ಈ ತತ್ತ್ವಗಳನ್ನು ಆಧರಿಸಿ ಭಾಗ–ಬಿ ಶಿಕ್ಷಕರು ತಮ್ಮ ತರಗತಿ ಕೋಣೆಗಳಲ್ಲಿ ಬಳಸಬಹುದಾದ ಸಲಹೆಗಳನ್ನು ನೀಡುತ್ತದೆ.[2]

**ಕಿರು ಮುಖಚಿತ್ರದಲ್ಲಿ (Vigette) ಪ್ರದರ್ಶಿಸಿದಂತೆ, ನಾವೇನಾದರೂ ಮಕ್ಕಳು ಅರ್ಥಪೂರ್ಣವಾಗಿ ಬರೆಯಲು ಸಹಾಯ ಮಾಡಬೇಕೆಂದು ಬಯಸಿದಲ್ಲಿ, ಅವರ ಜೀವಂತ ಅನುಭವಗಳಿಗೆ ಅವರ ಬರವಣಿಗೆಯನ್ನು ಜೋಡಿಸುವುದು ಬಹಳ ಮುಖ್ಯ. ನಾವು ಮಕ್ಕಳನ್ನು ಅವರ ಆಲೋಚನೆಗಳು ಮತ್ತು ಅನುಭವಗಳನ್ನು ಅಭಿವ್ಯಕ್ತಿಸಲು ಮತ್ತು ಹಂಚಿಕೊಳ್ಳಲು ಆಹ್ವಾನಿಸಿದಾಗ, ಆ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅವರು ಪ್ರೋತ್ಸಾಹಿತಗೊಳ್ಳುತ್ತಾರೆ.**

## ಭಾಗ–ಎ:
## ಬರವಣಿಗೆಯನ್ನು ಕಲಿಸಲು ಪ್ರಮುಖ ತತ್ತ್ವಗಳು

ಈ ವಿಭಾಗದಲ್ಲಿ ಚಿಕ್ಕ ಮಕ್ಕಳಿಗೆ ಬರವಣಿಗೆಯನ್ನು ಕಲಿಸಲು ಮೂರು ಪ್ರಮುಖ ತತ್ತ್ವಗಳನ್ನು ವಿವರಿಸುತ್ತೇವೆ,

1. ಬರವಣಿಗೆಯ ಪ್ರಸ್ತುತತೆಯನ್ನು ನೆಲೆ ಊರುವಂತೆ ಮಾಡುವುದು.
2. ಬರವಣಿಗೆಯನ್ನು ಮಾತು, ಚಿತ್ರ, ಓದು ಮತ್ತು ಆಟದ ಜೊತೆ ಸಂಯೋಜಿಸಲು ಮಕ್ಕಳಿಗೆ ಅನುಮತಿ ನೀಡುವುದು.
3. ಮಾರ್ಗದರ್ಶನ ನೀಡುವುದು.

### ತತ್ತ್ವ 1: ಬರವಣಿಗೆಯ ಪ್ರಸ್ತುತತೆಯನ್ನು ಸ್ಥಾಪಿಸುವುದು

ನಮ್ಮ ದೇಶದಲ್ಲಿ ಬಹಳಷ್ಟು ಮಕ್ಕಳು ಮೊದಲ ತಲೆಮಾರಿನ ಅಕ್ಷರಸ್ಥರು. ಅವರು ತಮ್ಮ ಪೋಷಕರು, ಒಡಹುಟ್ಟಿದವರು ಅಥವಾ ತಮ್ಮ ಸುತ್ತಲಿನ ಇತರ ಸಂಬಂಧಿಕರು ಬರೆಯುವುದನ್ನು ನೋಡುತ್ತಾ ಬೆಳೆದಿರುವುದಿಲ್ಲ. ಅವರು ಶಾಲೆಗೆ ಬಂದಾಗ ಬರೆಯುವುದನ್ನು ನಕಲಿಸಿ–ಬರೆಯಲು, ಆಮೇಲೆ ಪದಗಳನ್ನು ಮತ್ತು ವಾಕ್ಯಗಳನ್ನು ಮತ್ತೆ ಮತ್ತೆ ಬರೆಯಲು ಹೇಳಲಾಗುತ್ತದೆ.

---

1. ಹೆಚ್ಚಿನ ಮಾಹಿತಿಗೆ ಓದಿS., & S, Sajitha.(2018, April 23). Children's Writing: How does it Emerge and Why is this Significant? Retrieved: http://eli.tiss.edu/childrens-writing-how-does-it-emerge-and-why-is-this-significant/

2. ಹೆಚ್ಚಿನ ಮಾಹಿತಿಗೆ ಓದಿ: ಈ ವಿಷಯವನ್ನು ಕುರಿತ ಇಎಲ್ಐ ಬ್ಲಾಗ್ ನೋಡಿ.

ಚಿಕ್ಕ ಮಕ್ಕಳಿಗೆ ಹೇಳಿಕೊಡುವ ಅನೇಕ ಪದಗಳು ಅವರಿಗೆ ಅರ್ಥಪೂರ್ಣವಾಗಿ ಅಥವಾ ಆಸಕ್ತಿದಾಯಕವಾಗಿ ಇರುವುದಿಲ್ಲ. ಅವರಿಗೆ 'ಜಲ' ಪದವನ್ನು (ಜಲ–ನೀರು) 'ಜ' ಮತ್ತು 'ಲ' ಅಕ್ಷರಗಳನ್ನು ಅಭ್ಯಾಸಮಾಡಲು, ಮತ್ತೆ ಮತ್ತೆ ಬರೆಯಲು ಕಲಿಸಬಹುದು. ಅವರಿಗೆ 'ಜಲ' ಎಂದರೆ ಏನು ಎಂದು ಗೊತ್ತಿಲ್ಲದೇ ಇರಬಹುದು ಏಕೆಂದರೆ, ಅವರು ನೀರಿಗಾಗಿ ಉಪಯೋಗಿಸುವ ಪದವು 'ನೀರು'. ಅವರ ಶಾಲಾಜೀವನದ ಅನೇಕ ವರ್ಷಗಳನ್ನು ಇಂತಹ ಅರ್ಥರಹಿತ ಬರವಣಿಗೆಯು ತೆಗೆದುಕೊಳ್ಳಬಹುದು. ಓದು ಮತ್ತು ಬರೆಯುವುದರಲ್ಲಿ ಅವರು ಆಸಕ್ತಿಯನ್ನು ಕಳೆದುಕೊಳ್ಳಬಹುದು ಏಕೆಂದರೆ ಅವರ ಜೀವನದಲ್ಲಿ ಅದರ ಪ್ರಾಮುಖ್ಯತೆಯನ್ನು ಅವರು ಅರ್ಥ ಮಾಡಿಕೊಂಡಿರುವುದಿಲ್ಲ.

ಇದನ್ನು ತಪ್ಪಿಸುವುದು, ಹಾಗೂ ಆರಂಭಿಕ ಓದುವಿಕೆ ಮತ್ತು ಬರವಣಿಗೆಯ ಅನುಭವಗಳನ್ನು ಅವರ ಜೀವನಕ್ಕೆ ಅರ್ಥಪೂರ್ಣ ಮತ್ತು ಪ್ರಸ್ತುತವೆಂದು ಅನುಭವಿಸಲು ಮಕ್ಕಳಿಗೆ ಸಹಾಯ ಮಾಡುವುದು ಶಿಕ್ಷಣ ತಜ್ಞರ ಪ್ರಮುಖ ಕೆಲಸವಾಗಿದೆ. ಭಾಗ–ಬಿಯಲ್ಲಿ ಪ್ರಸ್ತುತತೆಯ ಪ್ರಾಮುಖ್ಯತೆಯನ್ನು ಬೆಳೆಸಲು ಮೂರ್ತ/ವಾಸ್ತವ ಕಲ್ಪನೆಗಳನ್ನು ಅನ್ವೇಷಿಸಲಾಗುವುದು. ವಿಸ್ತಾರವಾದ ತತ್ತ್ವವೇನೆಂದರೆ– ಶಿಕ್ಷಕರು ಮಕ್ಕಳಿಗೆ ಅವರು ಏನು ಯೋಚಿಸುತ್ತಾರೆ, ಭಾವಿಸುತ್ತಾರೆ, ಗಮನಿಸುತ್ತಾರೆ, ಅನುಭವಿಸುತ್ತಾರೆ ಮತ್ತು ಓದುತ್ತಾರೆ ಎಂಬುದನ್ನು ಇತರರೊಂದಿಗೆ ಮಾತುಕತೆಯ ಮೂಲಕ ಮತ್ತು ಬರವಣಿಗೆಯ ಮೂಲಕ ಹಂಚಿಕೊಳ್ಳಬಹುದು ಎನ್ನುವುದನ್ನು ತಿಳಿಯಲು ಸಹಾಯ ಮಾಡಬೇಕು.

ಬರವಣಿಗೆಯು ಒಂದು ಪ್ರಮುಖ ವಿಧಾನವಾಗಿದ್ದು, ಅದರ ಮೂಲಕ ನಮ್ಮ ಆಲೋಚನೆಗಳನ್ನು ದಾಖಲಿಸಲು ಮತ್ತು ಇತರರೊಂದಿಗೆ ಸಂವಹಿಸಲು ಸಾಧ್ಯವಾಗುತ್ತದೆ. ಶಿಕ್ಷಕರು ಈ ಪರಿಕಲ್ಪನೆಯನ್ನು ಎಳೆಯ ಬರಹಗಾರರಲ್ಲಿ ಸ್ಪಷ್ಟವಾಗಿ ರೂಪಿಸಬಹುದು ಮತ್ತು ಬರವಣಿಗೆಯಿಂದ ತಮ್ಮ ಜೀವನಕ್ಕೆ ಇರುವ ಸಾಧ್ಯತೆಗಳು ಮತ್ತು ಪರಿಣಾಮಗಳನ್ನು ಮಕ್ಕಳೊಂದಿಗೆ ಚರ್ಚಿಸಬಹುದು. (ಪರ್ಸೆಲ್–ಗೇಟ್ಸ್, 1997).

**ಹಿಂದೆ ಪ್ರಸ್ತುತಪಡಿಸಿದ ಕಿರು ಮುಖಚಿತ್ರದಲ್ಲಿ, ಶಿಕ್ಷಕಿಯು ಮಕ್ಕಳೊಂದಿಗೇ ಬರೆಯುತ್ತಾಳೆ. ಬರವಣಿಗೆಯು ಅವಳ ಜೀವನಕ್ಕೆ ಪ್ರಸ್ತುತ ಮತ್ತು ಅದು ಅರ್ಥಪೂರ್ಣ ಎನ್ನುವುದನ್ನು ಅವಳು ಪ್ರತ್ಯಕ್ಷವಾಗಿ ತೋರಿಸಿದ್ದಾಳೆ. ಇತರ ದಿನಗಳಲ್ಲಿ ಅವಳು ಬರೆದಿದ್ದನ್ನು ವಿದ್ಯಾರ್ಥಿಗಳಿಗೆ ಓದುತ್ತಾ, ಅವಶ್ಯಕತೆಯ ಮತ್ತು ಸಮುದಾಯದ ಪ್ರಜ್ಞೆಯನ್ನು ಸೃಷ್ಟಿಸುತ್ತಾಳೆ.**

## ತತ್ತ್ವ 2: ಮಕ್ಕಳು ಮಾತನಾಡುವುದು, ಚಿತ್ರ ಬಿಡಿಸುವುದು, ಓದುವುದು ಮತ್ತು ಆಟದ ಜೊತೆ ಬರವಣಿಗೆಯನ್ನು ಸಂಯೋಜಿಸಲು ಅವಕಾಶ ನೀಡುವುದು

ವಯಸ್ಕರು ಬರವಣಿಗೆಯು ಓದುವುದಕ್ಕಿಂತ ಭಿನ್ನ; ಓದುವುದು ಮಾತನಾಡುವುದಕ್ಕಿಂತ ಭಿನ್ನ; ಮತ್ತು ಇವೆಲ್ಲವೂ ಆಟಕ್ಕಿಂತ ಭಿನ್ನ ಎಂದೆಲ್ಲ ನೋಡಬಹುದು. ಆದರೆ ಚಿಕ್ಕಮಕ್ಕಳು ನಮ್ಮಂತೆ ಪದದ ಅನುಭವವನ್ನು ಹೊಂದುವುದು ಅಥವಾ ವಿಭಾಗೀಕರಿಸುವುದನ್ನು ಮಾಡುವುದಿಲ್ಲ. ಅವರಿಗೆ, ಅವರ ಜೀವನದ ಈ ಎಲ್ಲ ಅಂಶಗಳು ಪರಸ್ಪರ ಸಂಬಂಧಿತ ವರ್ಗಗಳ ಅನುಭವವಾಗಿದೆ. ಒಂದು ಕಥೆಯನ್ನು ಬರೆಯಲು ಹೇಳಿದಾಗ, ಮಗುವು ಒಂದು ಆಟಿಕೆಯನ್ನು ಎತ್ತಿಕೊಳ್ಳಬಹುದು, ಮತ್ತು ಆಟಿಕೆಯೊಂದಿಗೆ ನಟನೆಯನ್ನು ಬಳಸುತ್ತಾ ತನ್ನ ಸ್ನೇಹಿತನಿಗೆ ಕಥೆ ಹೇಳಲು ಪ್ರಾರಂಭಿಸಬಹುದು; ಸ್ನೇಹಿತನು ಅವನನ್ನು ವಿರೋಧಿಸಬಹುದು ಮತ್ತು ಅದರಲ್ಲಿ ಅವನ ಸ್ವಂತ ಕಥೆಯನ್ನು ಸೇರಿಸಬಹುದು ಮತ್ತು ಅವರು ಅದನ್ನು ನಿಲ್ಲಿಸಿ ಅವರು ಒಟ್ಟಿಗೆ ಕಲ್ಪಿಸಿಕೊಂಡ ಒಂದು ಭಾಗದ ಚಿತ್ರವನ್ನು ಬಿಡಿಸಬಹುದು.

ಒಬ್ಬ ಶಿಕ್ಷಕಿಯು ಇದನ್ನು ಕಥೆ ಬರೆಯುವುದು ಎಂದು ಭಾವಿಸದೆ ಇರಬಹುದು. ಆದರೆ ಮಕ್ಕಳು ತಮ್ಮನ್ನು ತಾವು ವ್ಯಕ್ತಪಡಿಸುವ ಈ ಎಲ್ಲ ವಿಧಾನಗಳನ್ನು ಒಟ್ಟುಗೂಡಿಸಿ ಬರೆಯಲು ಆರಂಭಿಸುವುದಕ್ಕೆ ಅನೇಕ ಅವಕಾಶಗಳನ್ನು, ಹಲವಾರು ಕಾರಣಗಳಿಗಾಗಿ ಪ್ರಯೋಜನವಾಗಲು ಅವರು ಅದನ್ನು ನೀಡುತ್ತಾರೆ.

ಮೊದಲನೆಯದಾಗಿ ಈ ಚಟುವಟಿಕೆಯನ್ನು ಅವರು ಅರ್ಥಪೂರ್ಣ ಮತ್ತು ಆಸಕ್ತಿದಾಯಕ ಎಂದು ನೋಡುತ್ತಾರೆ. ಎರಡನೆಯದಾಗಿ, ಇಂತಹ ದಾರಿಗಳನ್ನು ಬರೆಯಲು ಉಪಯೋಗಿಸುವಾಗ ಮಕ್ಕಳ ಸ್ವಂತದ ಆಲೋಚನೆಗಳು ಹೊರಹೊಮ್ಮುತ್ತವೆ ಮತ್ತು ಅವರ ಕಲ್ಪನಾಶಕ್ತಿ ಉತ್ತಮಗೊಳ್ಳಲು ಸಹಾಯಕವಾಗುತ್ತದೆ. ಮೂರನೆಯದಾಗಿ, ಸರಿಯಾದ ಕಾಗುಣಿತ ಮತ್ತು ಕೈ ಬರಹದ ಮೇಲೆ ಗಮನ ನೀಡದಿರುವುದರಿಂದ, ಭಯವಿಲ್ಲದೆ ಅವರು ತಾವು ಬಯಸಿದ್ದನ್ನು ವ್ಯಕ್ತಪಡಿಸಲು ಸಾಧ್ಯವಾಗುತ್ತದೆ. ನಾಲ್ಕನೆಯದಾಗಿ, ಅವರಿನ್ನೂ ಕರಗತ ಮಾಡಿಕೊಂಡಿಲ್ಲದ ಬರಹದ ಪ್ರಪಂಚವನ್ನು ಪ್ರವೇಶಿಸಲು ಸಾಧ್ಯವಾಗುತ್ತದೆ, ಅವರು ಮೌಖಿಕ ಭಾಷೆಯ ಮತ್ತು ಚಿತ್ರಬಿಡಿಸುವುದರ ಜ್ಞಾನವನ್ನು ಬಳಸಿ.

**ಮೊದಲಿಗೆ ಪ್ರಸ್ತುತಪಡಿಸಿದ ಕಿರು ಮುಖಚಿತ್ರದಲ್ಲಿ ನಾವು, ಮಕ್ಕಳು ಬಣ್ಣಗಳನ್ನು ಆಯ್ಕೆಮಾಡಿಕೊಂಡು, ಚಿತ್ರಬಿಡಿಸುತ್ತಾ ತಮ್ಮ ಬರಹದ ಬಗ್ಗೆ ತಮ್ಮ ಜೊತೆಗಾರರ ಜೊತೆ ಮಾತನಾಡುವಾಗ ನಿರಾಳವಾಗಿರುವುದನ್ನು ನೋಡುತ್ತೇವೆ. ಅವರ ಮಾತು, ಕಲೆ ಮತ್ತು ಬರವಣಿಗೆಯನ್ನು ಇನ್ನೂ ವಿಭಿನ್ನ ವಿಭಾಗಗಳಿಗೆ ಪ್ರತ್ಯೇಕಿಸಿಲ್ಲ, ಆದರೆ ಒಂದರೊಳಗೆ ಇನ್ನೊಂದು ಹರಿಯುವಂತೆ ನೋಡುತ್ತಿದ್ದಾರೆಂದು ಇದು ಸೂಚಿಸುತ್ತದೆ.**

ಮಕ್ಕಳು ಈಗಾಗಲೇ ಹೊಂದಿರುವ ಅಭಿವ್ಯಕ್ತಿಶೀಲ ಕೌಶಲ್ಯಗಳ ಈ ಸಂಗ್ರಹವನ್ನು ಉತ್ತಮವಾಗಿ ಬಳಸಿಕೊಳ್ಳುವಂಥ ಕಲಿಕೆಯ ದೊಡ್ಡ ಚೌಕಟ್ಟಿನಲ್ಲಿ ನೇಯ್ದಂತೆ ನಾವು ಬರವಣಿಗೆಯನ್ನು ನೋಡಬೇಕಾಗಿದೆ. ನಾವು ಈ ವಿಚಾರಗಳನ್ನು ಈ ವಿಭಾಗದಲ್ಲಿ ಇನ್ನೂ ಆಳವಾಗಿ ನೋಡುತ್ತೇವೆ.

### ಮಾತುಕತೆ ಮತ್ತು ಬರವಣಿಗೆ:

ಒಂದು ಮಗುವು ಮಾತುಕತೆಯ ಸಂಸ್ಕೃತಿಯ ಒಳಗೆ ಬೆಳೆಯುತ್ತಾ ಹೋಗುತ್ತದೆ. ಅವಳು ಮನೆಯಲ್ಲಿ, ಆಟದ ಮೈದಾನದಲ್ಲಿ ಮಾರುಕಟ್ಟೆಯಲ್ಲಿ ಮತ್ತು ಇತರ ಭೌತಿಕ ಸ್ಥಳಗಳಲ್ಲಿ ಮುಕ್ತವಾಗಿ ಮಾತನಾಡಿಕೊಂಡಿರಲು ಒಗ್ಗಿಕೊಂಡಿರುತ್ತಾಳೆ. ಎಷ್ಟೋ ಬಾರಿ ಆಟದ ಮಧ್ಯದಲ್ಲಿ ತಮಗೆ ತಾವೇ ಮಾತನಾಡುತ್ತಾ ಕಂಡುಬರುತ್ತಾರೆ. ತನ್ನ ಸುತ್ತಲಿನ ಪ್ರಪಂಚದ ಬಗ್ಗೆ ಅರ್ಥಮಾಡಿಕೊಳ್ಳಲು ಮತ್ತು ಇತರರೊಂದಿಗೆ ಸಂವಹಿಸಲು ಮಗುವಿಗೆ ಮಾತುಕತೆಯು ಒಂದು ಪ್ರಮುಖ ವಿಧಾನವಾಗಿದೆ. ಚಿಕ್ಕಮಕ್ಕಳ ಬರವಣಿಗೆಯನ್ನು ಬೆಂಬಲಿಸಲು ಮಾತುಕತೆಯನ್ನು ವಿವಿಧ ವಿಧಾನಗಳಲ್ಲಿ ಬಳಸಬಹುದು.

- ತರಗತಿಯವರು ಒಟ್ಟಿಗೆ ಪ್ರವಾಸಕ್ಕೆ ಹೋಗಬಹುದು, ಅಥವಾ ಪುಸ್ತಕವನ್ನು ಒಟ್ಟಿಗೆ ಓದಬಹುದು, ಮತ್ತು ಅದನ್ನು ಚರ್ಚಿಸುತ್ತಾ ಸಮಯ ಕಳೆಯಬಹುದು. ಚರ್ಚೆಯೆಂದರೆ ವಿಷಯ ಕೇಂದ್ರೀಕೃತ ಮಾತು. ಅದು ಮಕ್ಕಳು ತಮ್ಮ ಆಲೋಚನೆಗಳನ್ನು ನಂತರ ಬರವಣಿಗೆಗೆ ಇಳಿಸಲು ಸಹಾಯ ಮಾಡುತ್ತದೆ.

- ಬರೆಯುವಾಗ, ಮಕ್ಕಳು ಪರಸ್ಪರ ಮಾತನಾಡಬಹುದು ಅಥವಾ ಶಿಕ್ಷಕರು ವಿಭಿನ್ನ ಮಕ್ಕಳೊಂದಿಗೆ ಅವರ ಬರವಣಿಗೆಯ ಬಗ್ಗೆ ಸಮಾಲೋಚಿಸಬಹುದು.

- ತರಗತಿಯ ಜೊತೆ ತಮ್ಮ ಬರವಣಿಗೆಯನ್ನು ಹಂಚಿಕೊಂಡು ಮತ್ತು ಚರ್ಚಿಸಲು ಶಿಕ್ಷಕರು ಅವಕಾಶಗಳನ್ನು ಸಹ ಒದಗಿಸಬಹುದು.

ಹೀಗೆ, ಮಾತುಕತೆಯು ಮಕ್ಕಳಿಗೆ ತಮ್ಮ ಬರವಣಿಗೆಯಲ್ಲಿ ಬಳಸಲು ಆಗುವಂತಹ ಆಲೋಚನೆಗಳನ್ನು ಬೆಳೆಸಿಕೊಳ್ಳಲು ಸಹಾಯ ಮಾಡುತ್ತದೆ. ಮಾತುಕತೆಯ ಮೂಲಕ ಮಕ್ಕಳು ತಮ್ಮ ಪ್ರಶ್ನೆಗಳನ್ನು ಪರಿಹರಿಸಬಹುದು, ಪರಸ್ಪರರ ಬರವಣಿಗೆಯ ಬಗ್ಗೆ ಪ್ರತಿಕ್ರಿಯೆಯನ್ನು ಸ್ವೀಕರಿಸಬಹುದು ಮತ್ತು ನೀಡಬಹುದು, ವಿಚಾರಗಳನ್ನು ಹಂಚಿಕೊಳ್ಳಬಹುದು. ಶಿಕ್ಷಕರು ಮಾತುಕತೆಯ ಮೂಲಕ ತಮ್ಮ ವಿದ್ಯಾರ್ಥಿಗಳೊಂದಿಗೆ

ಸಂಪರ್ಕದಲ್ಲಿದ್ದರೆ, ಅವರು ಪ್ರತಿ ವಿದ್ಯಾರ್ಥಿಗೆ ಭಾವನಾತ್ಮಕ ಪ್ರಾಮುಖ್ಯತೆಯನ್ನು ಹೊಂದಿರುವ ಅನುಭವಗಳು ಮತ್ತು ವಿಷಯಗಳನ್ನು ಗುರುತಿಸಿ ಮತ್ತು ಅವುಗಳ ಬಗ್ಗೆ ಬರೆಯಲು ಅವರನ್ನು ಪ್ರೋತ್ಸಾಹಿಸುತ್ತಾರೆ.

**ಹಿಂದೆ ಪ್ರಸ್ತುತ ಪಡಿಸಿರುವ ಕಿರುಚಿತ್ರದಲ್ಲಿ, ಅವರಿಗೆ ಬರೆಯಲು ಹೇಳುವುದಕ್ಕೆ ಮುನ್ನ ಶಿಕ್ಷಕರು ಮದುವೆಯ ಬಗ್ಗೆ ಮಾತುಕತೆಯಲ್ಲಿ ಮಕ್ಕಳನ್ನು ತೊಡಗಿಸುತ್ತಾರೆ. ಮಾತುಕತೆಯು ಮಕ್ಕಳಿಗೆ ಅನುಭವದ ಬಗ್ಗೆ ಅವರ ಆಲೋಚನೆಗಳನ್ನು ಕೂಡಿಹಾಕಲು, ವಿವರಗಳನ್ನು ನೆನಪಿನಲ್ಲಿಡಲು ಮತ್ತು ಅದರ ಬಗ್ಗೆ ಬರೆಯುವುದಕ್ಕೆ ಮುಂಚೆ ಅದನ್ನು ಪುನಃ ಪುನಃ ಒಟ್ಟಾಗಿ ಯೋಚಿಸಲು ಸಹಾಯ ಮಾಡುವುದು.**

## ಚಿತ್ರ ಬಿಡಿಸುವುದು ಮತ್ತು ಬರವಣಿಗೆ:

ಬರವಣಿಗೆಯ ಜಗತ್ತಿಗೆ ಮಗುವು ಯಾವಾಗಲೂ ಚಿತ್ರಬಿಡಿಸುವುದರ ಜೊತೆಗೆ ಪ್ರವೇಶಿಸುತ್ತದೆ. ಪೆನ್ಸಿಲ್ ಮತ್ತು ಹಾಳೆಯನ್ನು ಕೊಡುವುದಕ್ಕೆ ಬಹು ಮುಂಚೆಯೇ ಅವಳು ಮರಳಿನಲ್ಲಿ, ಗೋಡೆಯ ಮೇಲೆ ಮತ್ತು ಅವಳ ಸುತ್ತಲೂ ಇರುವ ಎಲ್ಲ ಮೇಲ್ಮೈ ಮೇಲೆ ಬರೆಯುವಳು.

ನಾವು ಮಕ್ಕಳನ್ನು ಬರವಣಿಗೆಗೆ ಪರಿಚಯಿಸಿದಾಗ, ನಾವು ಅವರನ್ನು ಚಿತ್ರ ಬರೆಯುವುದರಿಂದ ದೂರ ಎಳೆಯುವ ಅಗತ್ಯವಿಲ್ಲ ಏಕೆಂದರೆ ಚಿತ್ರ ಬರೆಯುವುದು ಲಿಖಿತ ರೂಪದಲ್ಲಿ ಚಿಹ್ನೆಗಳನ್ನು ರೂಪಿಸುವುದರಲ್ಲಿ ಮಕ್ಕಳ ಆರಂಭಿಕ ಪ್ರಯತ್ನವಾಗಿದೆ. ಇದರಿಂದ ಇತರ ರೀತಿಯ ಚಿಹ್ನೆಗಳನ್ನು ರೂಪಿಸುವ ಪ್ರಯತ್ನಗಳು ವಿಕಸನಗೊಳ್ಳುತ್ತವೆ- ಅಕ್ಷರಗಳು ಪದಗಳು ಮತ್ತು ಇತ್ಯಾದಿ. ಆದ್ದರಿಂದ, ಆರಂಭಿಕ ವರ್ಷಗಳಲ್ಲಿ ಮಕ್ಕಳಿಗೆ ಚಿತ್ರ ಬಿಡಿಸಲು, ಅಥವಾ ಚಿತ್ರಬಿಡಿಸುವುದನ್ನು ಬರವಣಿಗೆಯ ಜೊತೆ ಬೆರೆಸಲು ಸಾಕಷ್ಟು ಅವಕಾಶಗಳನ್ನು ನಾವು ನೀಡಬೇಕು.

**ಹಿಂದೆ ಪ್ರಸ್ತುತಪಡಿಸಿರುವ ಕಿರುಚಿತ್ರದಲ್ಲಿ ಮಕ್ಕಳು ತಮ್ಮ ಚಟುವಟಿಕೆಯನ್ನು ಪ್ರಾರಂಭಿಸುತ್ತಿದ್ದಂತೆ ಶಿಕ್ಷಕರು ಕಾಗದ ಮತ್ತು ಪೆನ್ಸಿಲ್ ಜೊತೆ ಮಾತ್ರವಲ್ಲದೆ, ಬಣ್ಣಗಳ ಜೊತೆ ಸಹ ಅವರನ್ನು ಬಿಡುತ್ತಾರೆ ಎಂದು ನಾವು ನೋಡುತ್ತೇವೆ. ಬಹಳಷ್ಟು ಮಕ್ಕಳು ಬರೆಯುತ್ತಿದ್ದರೂ, ಶಿಕ್ಷಕರ ಬರವಣಿಗೆ ಮತ್ತು ಚಿತ್ರಬಿಡಿಸುವುದರ ಮಧ್ಯೆ ಎಲ್ಲೆ ಗುರುತಿಸುತ್ತಿಲ್ಲ. ಆಕೆ ಎರಡರ ಮಧ್ಯೆ ಹರಿವನ್ನು ಅನುಮತಿಸುತ್ತಾಳೆ.**

ಶಿಕ್ಷಕರಾಗಿ ಮಕ್ಕಳ ಚಿತ್ರಗಳಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳುವುದು ಬಹು ಮುಖ್ಯ. ಅವರು ಬರೆದ ಚಿತ್ರಗಳ ಬಗ್ಗೆ ನಾವು ಅವರನ್ನು ಸಂವಾದದಲ್ಲಿ ತೊಡಗಿಸಬಹುದು, ಅವರಿಗೆ ಪ್ರಶ್ನೆಗಳನ್ನು ಕೇಳಬಹುದು, ಪ್ರೋತ್ಸಾಹಿಕವಾಗಿ ಪ್ರತಿಕ್ರಿಯಿಸಬಹುದು, ಅವರ ಪ್ರಯತ್ನಗಳನ್ನು ಪ್ರಶಂಸಿಸಬಹುದು. ಇದು ಶಿಕ್ಷಕರ ಮತ್ತು ವಿದ್ಯಾರ್ಥಿಗಳ ನಡುವೆ ಸಂಬಂಧವನ್ನು ಬೆಳೆಸಲು ಸಹಾಯ ಮಾಡುತ್ತದೆ, ಇದು ಮಗುವಿನ ಕಲಿಕೆಗೆ ನಿರ್ಣಾಯಕವಾಗಿದೆ.

ಏಕಕಾಲದಲ್ಲಿ ಮಗುವನ್ನು ಲಿಪಿಗೆ ಸಹ ಪರಿಚಯಿಸಬಹುದು. ಹಾಗೆಯೇ ಮಕ್ಕಳು ಲಿಪಿಜ್ಞಾನವನ್ನು ಗಳಿಸುತ್ತಿದ್ದಂತೆಯೆ,



**ಚಿತ್ರ–2: ಅಕ್ಷರಗಳಂತಹ ಆಕಾರಗಳು ಮಗುವಿನ ಚಿತ್ರದೊಂದಿಗೆ ಇರುತ್ತವೆ.**

ಕಮಲಾ ನಿಂಬ್ಕಾರ್ ಬಾಲಭವನ,
ಪ್ರಗತ್ ಶಿಕ್ಷಣ್ ಸಂಸ್ಥಾ, ಫಾಲ್ಟನ್, ಮಹಾರಾಷ್ಟ್ರ

ಅವರು ಅದನ್ನು ತಾವು ಬಿಡಿಸುವ ಚಿತ್ರಗಳಲ್ಲಿ ಸಂಯೋಜಿಸಲು ಪ್ರಾರಂಭಿಸುತ್ತಾರೆ. ಉದಾಹರಣೆಗೆ, ಚಿತ್ರ 2ರಲ್ಲಿ, ಮಗುವು ತನ್ನ ಚಿತ್ರವನ್ನು ಅಕ್ಷರಗಳಂತಹ ಆಕಾರಗಳಿಂದ ಪೂರಕಗೊಳಿಸಿರುವುದನ್ನು ನೋಡುತ್ತೇವೆ. ಇದು ಚಿತ್ರದ ಪಕ್ಕದಲ್ಲಿ ಬರವಣಿಗೆಯ ನಿರೂಪಣೆಯ ಅನಿಸಿಕೆ ನೀಡುತ್ತದೆ.

ಕಾಲಾನಂತರದಲ್ಲಿ ಮಕ್ಕಳ ಬರವಣಿಗೆಯು ಹೆಚ್ಚು ರೂಢಿಬದ್ಧವಾಗುತ್ತದೆ. ಆದರೆ ಅದು ರಾತ್ರೋರಾತ್ರಿ ಸಂಭವಿಸುವುದಿಲ್ಲ; ಇದು ಕೆಲವು ವರ್ಷಗಳನ್ನು ತೆಗೆದುಕೊಳ್ಳಬಹುದು. ಈ ಹಂತಗಳಲ್ಲಿ ಶಿಕ್ಷಕರು ಕಾಗುಣಿತದ ಜೊತೆ ಮಕ್ಕಳು ಪ್ರಯೋಗ ನಡೆಸುವುದನ್ನು ನೋಡುತ್ತಾರೆ. ಚಿತ್ರ 3ರಲ್ಲಿ ಕಾಣುವಂತೆ ಅಕ್ಷರಗಳು ಮತ್ತು ಅವುಗಳ ಶಬ್ದಗಳ ಬಗ್ಗೆ ಅವರು ಇಲ್ಲಿಯವರೆಗೆ ಕಲಿತಿದ್ದನ್ನು ಆಧರಿಸಿ ಕಾಗುಣಿತಗಳನ್ನು 'ರಚಿಸುವುದು' ಅಥವಾ 'ಆವಿಷ್ಕರಿಸುವುದ'ನ್ನು ನೋಡಬಹುದು. ಇಲ್ಲಿ ಮಗುವು 'ಮೀನನ್ನು ನೋಡಿದ ನರಿ'ಯ ಬಗ್ಗೆ ಕಥೆಯನ್ನು ಬರೆಯಲು ಪ್ರಯತ್ನಿಸುತ್ತಿದೆ (ಮತ್ತು ಬಹುಶಃ ಅದನ್ನು ಹಿಡಿಯಲು ಪ್ರಯತ್ನಿಸುತ್ತಿರಬಹುದು). ಮೀನನ್ನು ಬೆನ್ನಟ್ಟಿದಂತೆ ನರಿಯನ್ನು ಬೇರೆಡೆಗೆ ಸೆಳೆಯುವ ಮಾರ್ಗವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾ ಮಗುವು 'ಆಗ ನರಿಯ ಕಣ್ಣು ಚಿತ್ತೆಯ ಮೇಲೆ ಬಿತ್ತು' (ನಂತರ ನರಿಯ ಕಣ್ಣು ಚಿಟ್ಟೆಯ ಮೇಲೆ ಬಿತ್ತು) ಎಂದು ತೀರ್ಮಾನಿಸುತ್ತದೆ. ಚಿಟ್ಟೆಯನ್ನು ನೋಡುವಂತೆ ನರಿಯನ್ನು ಮಾಡುವುದರ ಮೂಲಕ, ಮೀನು ತಪ್ಪಿಸಿಕೊಳ್ಳಲು ಮಗುವು ಒಂದು ಬಾಗಿಲನ್ನು ತೆರೆಯಿತು. ಈ ಬರವಣಿಗೆಯಲ್ಲಿ ಮಗು ಚಿತ್ರ ಮತ್ತು ಬರಹವನ್ನು ಸಂಯೋಜಿಸುವುದು, ಆವಿಷ್ಕರಿಸಿದ ಮತ್ತು ಸಾಂಪ್ರದಾಯಿಕ ಕಾಗುಣಿತಗಳನ್ನು ಜೋಡಿಸುವುದನ್ನು ನಾವು ನೋಡುತ್ತೇವೆ. ಮಗುವು ಪದಗಳ ಮಧ್ಯದಲ್ಲಿ ದೊಡ್ಡ ಮತ್ತು ಸಣ್ಣ ಅಕ್ಷರಗಳನ್ನು ಸಹ ಬೆರೆಸುತ್ತದೆ.




**ಚಿತ್ರ–3: ಆವಿಷ್ಕರಿಸಿದ ಮತ್ತು ಸಂಪ್ರದಾಯಿಕ ಕಾಗುಣಿತ ಮಿಶ್ರಣದ ಜೊತೆಯ ಒಂದು ಚಿತ್ರ.**

ಚಿತ್ರ ಕೃಪೆ; ಶೈಲಜ ಮೆನನ್

## ಓದುವುದು ಮತ್ತು ಬರವಣಿಗೆ:

ಬರವಣಿಗೆಯನ್ನು ಬೆಂಬಲಿಸುವುದರಲ್ಲಿ ಮತ್ತು ರೂಪಿಸುವುದರಲ್ಲಿ ಓದುವುದು ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ಓದುವುದು ಮತ್ತು ಬರವಣಿಗೆಯ ಪ್ರಕ್ರಿಯೆಗಳು ಪರಸ್ಪರ ಮನಬಂದಂತೆ ಹರಿಯುತ್ತವೆ ಮತ್ತು ನಾವು ಆಗಾಗ್ಗೆ ಓದುವುದು ನಾವು ಬರೆಯುವುದರ ಒಂದು ಭಾಗವಾಗುತ್ತದೆ. ನಾವು ಓದಿದ ಪಠ್ಯಗಳ ಮೂಲಕ ವಿವಿಧ ರೀತಿಯ ಬರವಣಿಗೆಗಳ ನಡುವಿನ ವ್ಯತ್ಯಾಸವನ್ನು ನಾವು ಕಲಿಯುತ್ತೇವೆ (ಉದಾ.:– ಟಿಪ್ಪಣಿ versus ಪಟ್ಟಿ, ವರದಿ versus ಕಥೆ). ನಾವು ಈ ಜ್ಞಾನವನ್ನು ನಮ್ಮ ಬರವಣಿಗೆಗೆ ತರುತ್ತೇವೆ. ಮಕ್ಕಳು ತಮ್ಮ ಸುತ್ತಲಿನ

ಮುದ್ರಿತ ಅಕ್ಷರಗಳಿಂದ ಕಲಿಯುತ್ತಾರೆ. ಶ್ರೀಮಂತ, ಅರ್ಥಪೂರ್ಣವಾದ ಮುದ್ರಿತ ಅಕ್ಷರವಿರುವ ವಾತಾವರಣವು ಆರಂಭಿಕ ಸಾಕ್ಷರತೆಯ ಚೌಕಟ್ಟಿನ ಬಲವಾದ ಆಧಾರ ಸ್ತಂಭವಾಗಲು ಇದು ಒಂದು ಕಾರಣವಾಗಿದೆ[3].

**ಕಿರುಚಿತ್ರದಲ್ಲಿ, 'ಪದಗಳ ಗೋಡೆ'ಯ ಮೇಲೆ 'ಮದುವೆ' ಪದವನ್ನು ಹೋಗಿ ಹುಡುಕಲು ಮಗುವಿಗೆ ಶಿಕ್ಷಕರು ಹೇಳುವಾಗ ಆಕೆಯು ಮಗುವಿಗಾಗಿ ಸುತ್ತಲಿನ ಶ್ರೀಮಂತ ಮುದ್ರಿತ ಅಕ್ಷರವಿರುವ ವಾತಾವರಣವನ್ನು ಉಪಯೋಗಿಸಿಕೊಂಡು ಓದುವುದು ಮತ್ತು ಬರವಣಿಗೆಯ ನಡುವೆ ಒಂದು ಸಂಬಂಧವನ್ನು ಸೃಷ್ಟಿಸುತ್ತಿದ್ದಾಳೆ.**

ಮಕ್ಕಳಿಗೆ ಸಾಹಿತ್ಯವನ್ನು ಗಟ್ಟಿಯಾಗಿ ಓದುವುದು ಮಕ್ಕಳ ಬರವಣಿಗೆಯನ್ನು ಬೆಂಬಲಿಸುವ ಬಹಳ ಪ್ರಮುಖ ಮಾರ್ಗಗಳಲ್ಲಿ ಒಂದಾಗಿದೆ. ವಿವಿಧ ರೀತಿಯ ಉದಾಹರಣೆಗೆ ಚಿತ್ರದ ಪುಸ್ತಕಗಳು, ಕವನಗಳು ಮತ್ತು ಕಾಲ್ಪನಿಕವಲ್ಲದ ಪುಸ್ತಕಗಳಿಗೆ ಶಾಲೆಯ ಆರಂಭಿಕ ದಿನಗಳಿಂದಲೇ ಒಡ್ಡಬೇಕು. ಪುಸ್ತಕಗಳಿಗೆ ಸಮೃದ್ಧವಾಗಿ ಒಡ್ಡಿಕೊಳ್ಳುವುದರಿಂದ ವಿವಿಧ ವಿಷಯಗಳು, ಸ್ಥಳಗಳು ಮತ್ತು ಸಂಸ್ಕೃತಿಗಳ ಬಗ್ಗೆ, ಹಾಗೂ ವಿವಿಧ ಉದ್ದೇಶಗಳಿಗಾಗಿ ಬರವಣಿಗೆಯ ಹಲವು ಶೈಲಿಗಳು ಮತ್ತು ತಂತ್ರಗಳ ಬಗ್ಗೆ ಮಕ್ಕಳ ಜ್ಞಾನವನ್ನು ಬೆಳೆಸಲು ಸಹಾಯ ಮಾಡುತ್ತದೆ. ಈ ಜ್ಞಾನವು ಮಗುವಿನ ಬರವಣಿಗೆಗೆ ತಳಹದಿಯಾಗಿದೆ.

**ಬರವಣಿಗೆಯನ್ನು ಬೆಂಬಲಿಸಲು ಸಾಹಿತ್ಯವನ್ನು ಬಳಸಬಹುದಾದ ವಿಧಾನಗಳ ಮೂರು ಉದಾಹರಣೆಗಳು ಇಲ್ಲಿವೆ.**

1. ಸಾಹಿತ್ಯವು ಮಕ್ಕಳಲ್ಲಿ ಭಾಷೆಯ ಜ್ಞಾನವನ್ನು ಹೆಚ್ಚಿಸುತ್ತದೆ. ಉತ್ತಮ ಸಾಹಿತ್ಯಕ್ಕೆ ಒಡ್ಡಿಕೊಳ್ಳುವುದು ಮಕ್ಕಳ ಭಾಷಾ ಕಲಿಕೆಯನ್ನು ಬಹಳಷ್ಟು ರೀತಿಯಲ್ಲಿ ಬೆಂಬಲಿಸುತ್ತದೆ, ಶಬ್ದಕೋಶ ಮತ್ತು ಗ್ರಹಿಕೆಯನ್ನು ವಿಸ್ತರಿಸುವುದರಿಂದ ಹಿಡಿದು ವ್ಯಾಕರಣ, ಸಂಘಟನೆ ಮತ್ತು ಬರವಣಿಗೆಯ ರಚನೆಯಲ್ಲಿ ಹೆಚ್ಚಿನ ವಿಶ್ವಾಸವನ್ನು ನೀಡುತ್ತದೆ. ವೈವಿಧ್ಯಮಯ ಪುಸ್ತಕಗಳಿಗೆ ಒಡ್ಡಿಕೊಳ್ಳುವುದರಿಂದ ಸಹ ವಿವಿಧ ಬಗ್ಗೆಯ ಸಾಹಿತ್ಯ ಪ್ರಕಾರಗಳನ್ನು ಉದಾಹರಣೆಗೆ ಕವನ/ಪದ್ಯ, ಗದ್ಯ, ಕಾದಂಬರಿ ಮತ್ತು ಕಾಲ್ಪನಿಕವಲ್ಲದ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಮಕ್ಕಳಿಗೆ ಸಹಾಯ ಮಾಡುತ್ತದೆ. ಒಡ್ಡಿಕೊಳ್ಳುವುದರಿಂದ ಮತ್ತು ಸೂಕ್ತ ಮಾರ್ಗದರ್ಶನದೊಂದಿಗೆ ಮಕ್ಕಳು ಈ ಪ್ರಕಾರಗಳನ್ನು ತಮ್ಮದೇ ಆದ ಬರವಣಿಗೆಯಲ್ಲಿ ಪರಿಚಯಿಸಲು ಪ್ರಾರಂಭಿಸಬಹುದು. ಶೀರ್ಷಿಕೆ ನೀಡುವುದು, ಮಾನ್ಯತೆ ಸಲ್ಲಿಸುವುದು ಮತ್ತು ರಚನೆಯಂತಹ ಬರವಣಿಗೆಯ ಸಂಪ್ರದಾಯಗಳನ್ನು ಸಹ ಅವರು ಕಲಿಯುತ್ತಾರೆ.




**ಚಿತ್ರ–4: 7ನೇ ವರ್ಗದ ಮಕ್ಕಳು ರಚಿಸಿದ ಪುಸ್ತಕವು ಶೀರ್ಷಿಕೆ ನೀಡುವುದು, ಮಾನ್ಯತೆ ಸಲ್ಲಿಸುವುದು, ಪರಿಚಯಿಸುವುದು ಮತ್ತು ವಿನ್ಯಾಸದಂತಹ ಚಿತ್ರಗಳ ಪ್ರತಿಗಳ ಬಗ್ಗೆ ಬೆಳೆಯುತ್ತಿರುವ ಜ್ಞಾನವನ್ನು ಪ್ರತಿಬಿಂಬಿಸುತ್ತಿದೆ.**

ಕಮಲ ನಿಂಬ್ಕರ್ ಬಾಲಭವನ, ಪ್ರಗತ್ ಶಿಕ್ಷಣ ಸಂಸ್ಥೆ, ಫಾಲ್ಟನ್, ಮಹಾರಾಷ್ಟ್ರ.

3 ಮುದ್ರಿತ ಅಕ್ಷರವಿರುವ ಶ್ರೀಮಂತ ವಾತಾವರಣಗಳ ಬಗ್ಗೆ ಹೆಚ್ಚು ಕಲಿಯಲು ಸಲಹೆ/ಸಂಪರ್ಕಿಸಿ http://eli.tiss.edu/wp-content/uploads/2017/08/ELI Practitioner Brief8 print_rich_Environment_in_classroom_1.pdf

2. ಸಾಹಿತ್ಯವು ಮಕ್ಕಳಲ್ಲಿ ಪ್ರಪಂಚದ ಬಗೆಗಿನ ಜ್ಞಾನವನ್ನು ಹೆಚ್ಚಿಸುತ್ತದೆ. ವಿಭಿನ್ನ ವಿಷಯ ಕ್ಷೇತ್ರಗಳ ಬಗೆಗಿನ ಜ್ಞಾನವನ್ನು ವಿದ್ಯಾರ್ಥಿಗಳಲ್ಲಿ ಬೆಳೆಸಲು ಸಾಹಿತ್ಯವನ್ನು ಬಳಸಬಹುದು. ಉದಾಹರಣೆಗೆ, ಗಣಿತ, ವಿಜ್ಞಾನ ಅಥವಾ ಸಾಮಾನ್ಯ ವಿಜ್ಞಾನ. ಉದಾಹರಣೆಗೆ, ನಗರದ ಮಕ್ಕಳು ಆದಿವಾಸಿ ಜನಾಂಗಗಳನ್ನು ಅರ್ಥಮಾಡಿಕೊಳ್ಳಲು ಸುಗಮಕಾರರು 'ಅಂಡಮಾನ್‌ನ ಹುಡುಗ', 'ಕಾಳಿ ಮತ್ತು ಕೆರೆಹಾವು' ಮತ್ತು 'ಏಕೆ ಏಕೆ ಹುಡುಗಿ' ಪುಸ್ತಕಗಳನ್ನು ಅವರಿಗೆ ಪರಿಚಯಿಸಬಹುದು. ಏಕೆಂದರೆ, ಆದಿವಾಸಿ ಬದುಕು ಮಧ್ಯಮ ವರ್ಗದ ಮಕ್ಕಳ ಅನುಭವಗಳ ವ್ಯಾಪ್ತಿಯಿಂದ ಸಂಪೂರ್ಣವಾಗಿ ಹೊರಗಿರುವಂಥದ್ದು. ಮೇಲ್ನೋಟಕ್ಕೆ ಕೀಳಾಗಿ ಕಾಣುವ ಸಿದ್ಧಮಾದರಿಗಳ ಮೂಲಕ ಮಾತ್ರ ತಿಳಿದು ಬರುವಂಥ ಅಪರಿಚಿತ ಜೀವನ ವಿಧಾನಗಳ ಬಗ್ಗೆ ಮಕ್ಕಳು ಇನ್ನಷ್ಟು ತಿಳಿದುಕೊಳ್ಳಲು ಈ ಪುಸ್ತಕಗಳು ಸಹಾಯ ಮಾಡುತ್ತವೆ. ಈ ಪುಸ್ತಕಗಳಿಗೆ ಒಡ್ಡಿಕೊಳ್ಳುವುದು ಮತ್ತು ನಂತರ ಬರುವಂಥ ಸಂಭಾಷಣೆಗಳು ಮಕ್ಕಳನ್ನು ಆದಿವಾಸಿಗಳ ಬಗ್ಗೆ ಬರೆಯಲು ಇನ್ನೂ ಹೆಚ್ಚಿನ ತಿಳುವಳಿಕೆಯ ಸ್ಥಾನದಲ್ಲಿರಿಸುತ್ತದೆ.




**ಚಿತ್ರ–5: ಕೆಲವು ಆದಿವಾಸಿ ಜನಾಂಗಗಳ ಜೀವನದ ಬಗ್ಗೆ ಮಕ್ಕಳಿಗೆ ತಿಳಿಸಲು ಉಪಯೋಗಿಸುವ ಪುಸ್ತಕಗಳ ಉದಾಹರಣೆಗಳು.**

3. ಸಾಹಿತ್ಯವು ಅವರ ಅನುಭವಗಳ ಬಗ್ಗೆ ಬರೆಯಲು ಮತ್ತು ಹಂಚಿಕೊಳ್ಳಲು ಮಕ್ಕಳನ್ನು ಪ್ರೇರೇಪಿಸುತ್ತದೆ. ಅನೇಕ ಚಿಕ್ಕ ಮಕ್ಕಳು ತಮ್ಮ ಅನುಭವಗಳ ಬಗ್ಗೆ ಬರೆಯುವ ಸಾಧ್ಯತೆಯನ್ನು ಪರಿಗಣಿಸಿರಲಾರರು. ಪುಸ್ತಕಗಳಲ್ಲಿ ಬರೆದ ಅನುಭವಗಳು ಅವರದೇ ಆದದ್ದರಿಂದ ಹಂಚಿಕೊಳ್ಳಲು ಹೆಚ್ಚು ಯೋಗ್ಯವೆಂದು ತೋರಬಹುದು. ಚಿಕ್ಕ ಮಕ್ಕಳ ಜೊತೆ ವಿವಿಧ ಪುಸ್ತಕಗಳನ್ನು ಹಂಚಿಕೊಳ್ಳುವುದು, ಅವುಗಳನ್ನು ಚರ್ಚಿಸುವುದು, ಮತ್ತು ಅವರು ಓದಿದ ಕಥೆಗಳಿಗೆ ಪ್ರತಿಕ್ರಿಯೆಗಳನ್ನು ಬರೆಯಲು ಪ್ರೋತ್ಸಾಹಿಸುವುದರಿಂದ ಅವರಲ್ಲಿ ಆತ್ಮವಿಶ್ವಾಸ ಮತ್ತು ಅವರ ಅನುಭವಗಳನ್ನು ಹಂಚಿಕೊಳ್ಳಲು ಅಥವಾ ಅವರ ಜೀವನಗಳ ಬಗ್ಗೆ ಬರೆಯಲು ಇಚ್ಛೆಯನ್ನು ತುಂಬಬಹುದು. ಇಲ್ಲಿಯವರೆಗೆ ಸಾಮಾನ್ಯವಾಗಿದ್ದ ಮತ್ತು ಹಂಚಿಕೊಳ್ಳಲು ಅನರ್ಹವೆಂದು ತೋರುತ್ತಿರುವುದು ಇದ್ದಕ್ಕಿದ್ದಂತೆ ಕಥೆಯ ಆಕಾರವನ್ನು ಪಡೆದುಕೊಳ್ಳಬಹುದು,

ಹಾಗಿದ್ದರೂ, ಇದಕ್ಕೆ ಶಿಕ್ಷಕರಿಂದ ಅಪಾರ ಪ್ರಯತ್ನ ಮತ್ತು ಬೆಂಬಲ ಬೇಕಾಗುತ್ತದೆ. ಶಿಕ್ಷಕರು ಮಕ್ಕಳು ಆಸಕ್ತಿಗಳು ಮತ್ತು ಅನುಭವಗಳನ್ನು ಅರಿತವರಾಗಿರಬೇಕು, ಮತ್ತು ಅವರನ್ನು ಅದನ್ನು ಹಂಚಿಕೊಳ್ಳಲು ಪ್ರೋತ್ಸಾಹಿಸುವವರಾಗಿರಬೇಕು. ಚಿತ್ರ 6ರಲ್ಲಿ ತೋರಿಸಿದಂತೆ, ಶಿಕ್ಷಕರು ಮಕ್ಕಳನ್ನು ಅವರು ಓದಿದ ಕಥೆಗಳ ಅವರದೇ ನಿರೂಪಣೆಗಳನ್ನು ಬರೆಯಲು ಸಹ ಪ್ರೋತ್ಸಾಹಿಸಬಹುದು.




**ಚಿತ್ರ 6 –'ಟಾಪ್ಸಿ ಟರ್ವಿ ಲ್ಯಾಂಡ್' ಕಥೆಯನ್ನು ಕುರಿತು ತನ್ನದೇ ನಿರೂಪಣೆ ನೀಡುತ್ತಿರುವ ಮಗು.**

## ತತ್ತ್ವ 3: ಬರವಣಿಗೆಯ ಬೋಧನೆಗೆ ಮಾರ್ಗದರ್ಶನ ನೀಡುವುದು.

ಬರವಣಿಗೆಯ ಪ್ರಸ್ತುತತೆಯನ್ನು ಅರಿಯುವುದು ಹಾಗೂ ಮಾತನಾಡುವುದು, ಆಟವಾಡುವುದು, ಚಿತ್ರಬಿಡಿಸುವುದು, ಓದುವುದು ಮತ್ತು ಬರೆಯುವ ಪ್ರಕ್ರಿಯೆಗಳನ್ನು ಒಂದರೊಳಗೊಂದು ಬೆರೆಸುತ್ತ ಒಟ್ಟೊಟ್ಟಿಗೇ ಕಲಿಯಲು ಮಗುವಿಗೆ ಅನುಮತಿ ನೀಡುವುದು– ಇವು ನಾವು ಚರ್ಚಿಸಿದ ಮೊದಲ ಎರಡು ತತ್ತ್ವಗಳು. ಮೂರನೇ ತತ್ತ್ವವು ನಾವು ಮಕ್ಕಳಿಗೆ ಚೆನ್ನಾಗಿ ಬರೆಯಲು ಖಚಿತವಾದ ಮಾರ್ಗದರ್ಶನವನ್ನು ನೀಡಬೇಕು ಎಂದು ಹೇಳುತ್ತದೆ; ಸುಮ್ಮನೇ 'ಸ್ವೇಚ್ಛೆಯ ಬರವಣಿಗೆ'ಯ ಸಮಯಕ್ಕೆ ನಾವು ಅವರನ್ನು ಬಿಡಲು ಸಾಧ್ಯವಿಲ್ಲ.

ಎಳೆಯ ಬರಹಗಾರರಿಗೆ ಮಾರ್ಗದರ್ಶನ ನೀಡುವುದೆಂದರೆ ಏನರ್ಥ? ಸಾಂಪ್ರದಾಯಿಕವಾಗಿ ಚೆನ್ನಾಗಿ ಬರೆಯುವ ಮಕ್ಕಳು ಒಳ್ಳೆಯ ಅಂಕಗಳನ್ನು ಅಥವಾ ಅವರ ಬರವಣಿಗೆಯ ಬಗ್ಗೆ ಪ್ರತಿಕ್ರಿಯೆಗಳನ್ನು ಗಳಿಸುತ್ತಾರೆ; ಆದರೆ ಕಳಪೆ ಅಥವಾ ಸಾಮಾನ್ಯ ಬರಹಗಾರರು ಅವರ ಬರವಣಿಗೆಯನ್ನು ಹೇಗೆ ಸುಧಾರಿಸಬಹುದೆಂಬುದರ ಬಗೆಗೆ ಹೆಚ್ಚಿನ ಮಾರ್ಗದರ್ಶನ ಅಥವಾ ಪ್ರತಿಕ್ರಿಯೆಯನ್ನು ಪಡೆಯದೇ ಹೋಗುತ್ತಾರೆ. ನಿಮ್ಮ ತರಗತಿಯಲ್ಲಿನ ಮೂವರು ವಿದ್ಯಾರ್ಥಿಗಳ ಬಗ್ಗೆ ಯೋಚಿಸಿ, ಒಬ್ಬರು ಬರೆಯಲು ಉತ್ತಮ ಕಲ್ಪನೆಗಳನ್ನು ಹೊಂದಿದ್ದಾರೆ, ಆದರೆ ಅದನ್ನು ಇತರರು ಅರ್ಥಮಾಡಿಕೊಳ್ಳುವ ರೀತಿಯಲ್ಲಿ ಕಾಗದದ ಮೇಲೆ ಇರಿಸಲು ಎಂದಿಗೂ ಸಮರ್ಥರಾಗುವುದಿಲ್ಲ. ನೀವು ಅವಳ ಬರಹವನ್ನು ಓದುತ್ತಿದ್ದ ಹಾಗೇ ಅವಳು ತನ್ನ ಕಲ್ಪನೆಗಳನ್ನು ಸಂಯೋಜಿಸುವಾಗ ಕಷ್ಟ ಪಡುವಳೆನ್ನುವುದನ್ನು ನೀವು ಅರಿಯುತ್ತೀರಿ. ಎರಡನೇ ಮಗುವು ಬಲವಾದ ಕಲ್ಪನೆಗಳನ್ನು ಹೊಂದಿದೆ ಮತ್ತು ಅದನ್ನು ಸಂಯೋಜಿಸಲೂಬಹುದು, ಆದರೆ ಅವಳ ಕಾಗುಣಿತ ಎಷ್ಟು ಕಳಪೆಯಾಗಿದೆಯೆಂದರೆ ಅವಳು ಏನು ಬರೆದಿದ್ದಾಳೆಂದು ಓದುವುದು ಬಹಳ ಕಠಿಣ. ಮೂರನೇ ಮಗುವು ತನ್ನ ಕಲ್ಪನೆಗಳನ್ನು ವ್ಯಕ್ತಪಡಿಸಲು ಶಬ್ದಕೋಶ ಅಥವಾ ಪದಗಳ ಕೊರತೆಯನ್ನು ಹೊಂದಿದೆ, ಈ ಮಕ್ಕಳಲ್ಲಿ ಪ್ರತಿಯೊಬ್ಬರಿಗೂ ಅವರ ಬರವಣಿಗೆಯ ಪ್ರಕಾರ ನಿರ್ದಿಷ್ಟ ಮಾರ್ಗದರ್ಶನ ಬೇಕು. ವಿಚಾರಗಳನ್ನು ಹೇಗೆ ಸಂಯೋಜಿಸಬೇಕು ಎಂಬುದನ್ನು ಕಲಿಸಬೇಕು. ಮೂರನೆಯವರಿಗೆ ಶಬ್ದಕೋಶವನ್ನು ಗಳಿಸಿಕೊಳ್ಳಲು ಬೆಂಬಲದ ಅಗತ್ಯವಿದೆ.

ಹೆಚ್ಚಿನ ಭಾರತೀಯ ತರಗತಿಗಳಲ್ಲಿ, ವಿದ್ಯಾರ್ಥಿಗಳು ಬರೆದಾಗ ಅವರಿಗೆ ಪ್ರತಿಕ್ರಿಯೆ ಸಿಗುವುದು ಅವರ ಕಾಗುಣಿತ, ಕೈಬರಹ ಮತ್ತು ವ್ಯಾಕರಣದ ಬಗ್ಗೆ ಮಾತ್ರ. ಉತ್ತಮ ಬರವಣಿಗೆಯ ಇತರ ಅಂಶಗಳಿಗೆ ಶಿಕ್ಷಕರು ವಿರಳವಾಗಿ ಗಮನಹರಿಸುತ್ತಾರೆ. ರುತ್ ಕುಲ್ಹಾಮ್‌ರವರು (2003) ನಾವು ಮಕ್ಕಳಿಗೆ ಮಾರ್ಗದರ್ಶನ ಮಾಡಬೇಕಾದ 6 ಬರವಣಿಗೆಯ ಲಕ್ಷಣಗಳನ್ನು ಗುರುತಿಸಿದ್ದಾರೆ:

- **ವಿಚಾರಗಳು:** ಮಕ್ಕಳು ತಮ್ಮ ಬರವಣಿಗೆಗೆ ಆಸಕ್ತಿದಾಯಕ ಅಥವಾ ಪ್ರಮುಖ ವಿಚಾರಗಳನ್ನು ಗುರುತಿಸಲು ವಯಸ್ಕರು ಸಹಾಯ ಮಾಡಬಹುದು.

- **ಸಂಯೋಜನೆ:** ಬರವಣಿಗೆಯ ತುಣುಕಿನಲ್ಲಿನ ವಿಚಾರಗಳ ಸಂಯೋಜನೆಯು ತಾರ್ಕಿಕ ಮತ್ತು ಸುಸಂಬದ್ಧವಾಗಿರಬೇಕು ಮಕ್ಕಳು ಬರೆಯಲು ಹೊರಡುವ ಮೊದಲು ಅವರ ಆಲೋಚನೆಗಳ ಫ್ಲೋಚಾರ್ಟ್ ರಚಿಸಲು ನೀವು ಅವರನ್ನು ಕೇಳಬಹುದು.

- **ಧ್ವನಿ:** ಧ್ವನಿಯು ಭಾವನೆ ಅಥವಾ ಮನಃಸ್ಥಿತಿಯನ್ನು ಸ್ಪಷ್ಟವಾಗಿ ಬರಹದ ತುಣುಕಿನಲ್ಲಿ ತಿಳಿಸುವುದನ್ನು ಸೂಚಿಸುತ್ತದೆ. ಉದಾಹರಣೆಗೆ, ಒಂದು ದಿನ ಅವಳು ಕೆಳಗೆ ಬಿದ್ದಾಗ ಏನಾಯಿತು ಎಂದು ವಿವರಿಸಲು ಮಗು ಪ್ರಯತ್ನಿಸುತ್ತಿರುವುದನ್ನು ಊಹಿಸಿಕೊಳ್ಳಿ; 'ನಾನು ಏಣಿಯಿಂದ ಕೆಳಗೆ ಬಿದ್ದೆ, ಅಪ್ಪ ನನಗೆ ಸಹಾಯ ಮಾಡಲು ಬಂದರು' ಎಂದು ಅವಳು ಬರಿಯಬಹುದು, ಅಥವಾ 'ಅಯ್ಯೋ ದೇವರೇ! ಸಹಾಯಮಾಡಿ! ನನ್ನ ಮಗು ಬೀಳುತ್ತಿದ್ದಾಳೆ! ಎಂದು ಕಿರುಚುತ್ತಾ ಅಪ್ಪ ನನ್ನ ಕಡೆಗೆ ಓಡಿ ಬಂದರು' ಎಂದೂ ಬರೆಯಬಹುದು.

  ಎರಡನೆಯ ನಿರೂಪಣೆಯಲ್ಲಿ, ಆ ಕ್ಷಣದ ಭಾವನೆಯನ್ನು ಹೆಚ್ಚು ಸ್ಪಷ್ಟವಾಗಿ ತಿಳಿಸಲಾಗಿದೆ. ಧ್ವನಿಯಿರುವ ತುಣುಕುಗಳು ಕಡೆಯ ಭಾವನೆಯನ್ನು ಮತ್ತು ಬರಹಗಾರನ ಆಲೋಚನೆಗಳು ಮತ್ತು ಭಾವನೆಗಳನ್ನು ಸ್ಪಷ್ಟತೆಯಿಂದ ತಿಳಿಸುತ್ತವೆ.

■ **ಪದದ ಆಯ್ಕೆ:** ಒಂದು ಆಲೋಚನೆಯನ್ನು ನಿಖರವಾಗಿ ಮತ್ತು ಹಿಡಿದಿಟ್ಟುಕೊಳ್ಳುವ ಹಾಗೆ ತಿಳಿಸುವಾಗ ಆಸಕ್ತಿದಾಯಕ ಮತ್ತು ನಿರ್ದಿಷ್ಟ ಪದ ಬಳಕೆಯ ಪ್ರಾಮುಖ್ಯತೆಯ ಬಗ್ಗೆ ಮಕ್ಕಳಿಗೆ ಬೋಧಿಸಿ. ತಮ್ಮ ವಿಷಯಗಳನ್ನು ಹೆಚ್ಚು ಮನವರಿಕೆಯಾಗಿಸಲು ಸಹಾಯ ಮಾಡುವ ಸಮಾನಾರ್ಥಕ ಪದಗಳು, ನುಡಿಗಟ್ಟುಗಳು, ಭಾಷಾವೈಶಿಷ್ಟ್ಯಗಳನ್ನು ನೋಡುವಂತೆ ಅವರನ್ನು ಪ್ರೋತ್ಸಾಹಿಸಿ. ಉದಾಹರಣೆಗೆ, ಒಂದು ಮಗುವು 'ಸಂತೋಷ' ಎಂಬ ಪದವನ್ನು ಮತ್ತೆ ಮತ್ತೆ ಉಪಯೋಗಿಸುತ್ತಿದ್ದರೆ ಇತರ ಪದಗಳನ್ನು ಪ್ರಯತ್ನಿಸಲು ನೀವು ಅವಳನ್ನು ಕೇಳಬಹುದು, ಉದಾಹರಣೆಗೆ, ಆನಂದ, ಹಿಗ್ಗು ಮತ್ತು ಸಂತಸ ಹೀಗೆ... ಅದು ಬರಹದ ತುಣುಕನ್ನು ಅವಲಂಬಿಸಿರುತ್ತದೆ.

■ **ವಾಕ್ಯದ ನಿರರ್ಗಳತೆ:** ಬಹಳ ಸಲ ಮಕ್ಕಳು ತಮ್ಮ ವಾಕ್ಯಗಳನ್ನು ಆರಂಭಿಸಲು ಒಂದೇ ರೀತಿಯ ಪದಗುಚ್ಛಗಳನ್ನು ಬಳಸುತ್ತಾರೆ. ಉದಾಹರಣೆಗೆ, 'ನಾನು ಹಲ್ಲನ್ನು ಉಜ್ಜಿದೆ. ನಾನು ಸ್ನಾನ ಮಾಡಿದೆ. ನಾನು ತಿಂಡಿ ತಿಂದೆ. ಆಮೇಲೆ ನಾನು ಶಾಲೆಗೆ ಹೋದೆ'. ಅವರ ಗಮನವನ್ನು ವಾಕ್ಯರಚನೆಯ ಪುನರಾವರ್ತಿತ ಸ್ವರೂಪಕ್ಕೆ ಕರೆದೊಯ್ಯಿರಿ, ಅವರು ಇದನ್ನು ವಿಭಿನ್ನವಾಗಿ ಮತ್ತು ಒಳ್ಳೆ ಸರಾಗವಾಗಿ ಹೇಗೆ ಹೇಳಬಹುದು? ಉದಾಹರಣೆಗೆ, 'ನನ್ನ ದಿನ ಎಂದಿನಂತೆ ಪ್ರಾರಂಭವಾಯಿತು, ಹಲ್ಲುಜ್ಜುವುದರಿಂದ ಮತ್ತು ಸ್ನಾನದಿಂದ, ಬಿಸಿ ದೋಸೆ ಮತ್ತು ಚಟ್ನಿಯ ತಿಂಡಿ ಮತ್ತು ಒಂದು ಲೋಟ ಹಾಲಿನ ನಂತರ, ನಾನು ಶಾಲೆಗೆ ಹೊರಟೆ.' ಎರಡನೇ ನಿರೂಪಣೆಯಲ್ಲಿ ಬರವಣಿಗೆಯು ಹೆಚ್ಚು ನಿರರ್ಗಳ ಮತ್ತು ಸ್ವಾಭಾವಿಕ ಎಂದು ಅನಿಸುತ್ತದೆ.

■ **ಶಿಷ್ಟಾಚಾರಗಳು:** ಉತ್ತಮ ಕಾಗುಣಿತ, ವ್ಯಾಕರಣ ಮತ್ತು ಅಚ್ಚುಕಟ್ಟಾಗಿ ಕೈಬರಹದಿಂದ ಬರೆಯಲು ಖಂಡಿತವಾಗಿ ನಾವು ಮಕ್ಕಳಿಗೆ ಕಲಿಸಬೇಕು. ಆರಂಭದ ವರ್ಷಗಳಲ್ಲಿ ಬಹಳ ಸಲ ಚಿಕ್ಕ ಮಕ್ಕಳು, ವಿಶೇಷವಾಗಿ ಅವರ ಆಲೋಚನೆಗಳು ಮತ್ತು ಭಾವನೆಗಳನ್ನು ವ್ಯಕ್ತಪಡಿಸಲು ಮತ್ತು ಸಂವಹನ ಮಾಡಲು ಗಮನಹರಿಸಬೇಕೆಂದು ನಾವು ಬಯಸಿದರೆ, ಅವರು ಶಿಷ್ಟಾಚಾರಬದ್ಧವಾಗಿ ಪಾಂಡಿತ್ಯದಿಂದ ಬರೆಯುತ್ತಾರೆಂದು ನಾವು ನಿರೀಕ್ಷಿಸಲಾಗುವುದಿಲ್ಲ. ಆದರೆ ನಾವು ಖಂಡಿತವಾಗಿಯೂ ಒಂದು ಸಮಯದಲ್ಲಿ ಶಿಷ್ಟಾಚಾರಗಳ ಕೆಲವು ಅಂಶಗಳನ್ನು ಕಲಿಸಬಹುದು. ಅವರ ಬರವಣಿಗೆಯ ಆರಂಭದ ಹಂತದಲ್ಲಿ ನಾವು ಅವರನ್ನು ಅವರು ಬರೆಯಬೇಕೆಂದುಕೊಂಡಿರುವ ಪದಗಳ ಮೊದಲ ಶಬ್ದಗಳಿಗೆ ಗಮನ ನೀಡಿ, ಸರಿಯಾದ ಅಕ್ಷರವನ್ನು ಬರೆಯುವಂತೆ ಮಾಡಬಹುದು. ನಂತರದ ಹಂತದಲ್ಲಿ ಸರಳ ಪದಗಳನ್ನು ಸರಿಯಾಗಿ ಉಚ್ಚರಿಸಲಾಗುವುದು ಎಂದು ನಾವು ನಿರೀಕ್ಷಿಸಬಹುದು. ಕ್ರಮೇಣ ಹೆಚ್ಚು ಹೆಚ್ಚು ಸಂಕೀರ್ಣ ಪದಗಳಿಗೆ ಹೋಗುತ್ತೇವೆ. ಕಾಲಾನಂತರದಲ್ಲಿ ಅವರು ವಿರಾಮ ಚಿಹ್ನೆ ಮತ್ತು ವ್ಯಾಕರಣಕ್ಕೆ ಗಮನ ನೀಡುತ್ತಾರೆ ಎಂದು ನಾವು ನಿರೀಕ್ಷಿಸಬಹುದು. ಆದರೆ ಇದು ಬರವಣಿಗೆಯ ಇತರ ಅಂಶಗಳನ್ನು ಬೋಧಿಸುವುದರ ಜೊತೆಯಲ್ಲೇ ಆಗಬೇಕು ಮತ್ತು ಕರಗತವಾಗಲು ಹಲವಾರು ವರ್ಷಗಳು ಬೇಕಾಗುತ್ತದೆ.

ಒಳ್ಳೆಯ ಬರವಣಿಗೆಗೆ ಸಮಯ ಮತ್ತು ಅನೇಕ ಸುತ್ತಿನ ಕೆಲಸ ಮಾಡ ಬೇಕಾಗುತ್ತದೆ. ಬರವಣಿಗೆಯ ಚಕ್ರ ಅಥವಾ ಬರವಣಿಗೆಯ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳಲು ಚಿಕ್ಕ ಮಕ್ಕಳಿಗೆ ಸಹ ಸಹಾಯಮಾಡಬಹುದು.

ಅದು ಈ ಕೆಳಗಿನ ಅಂಶಗಳನ್ನು ಒಳಗೊಳ್ಳುತ್ತದೆ:

■ **ಬರವಣಿಗೆ ಪೂರ್ವದ ಹಂತ:** ಮಕ್ಕಳು ತಾವು ಬರೆಯಲಿರುವ ವಿಚಾರಗಳನ್ನು ತಮ್ಮ ಗೆಳೆಯರೊಂದಿಗೆ ಅಥವಾ ಶಿಕ್ಷಕರೊಂದಿಗೆ ವಿಚಾರಮಂಥನ ಮಾಡಲು ಮತ್ತು ಚರ್ಚಿಸಲು ಸಹಾಯ ಮಾಡಿ, ಮತ್ತು ಹೀಗೆ ಪರಿಕಲ್ಪನೆ ನಕ್ಷೆಗಳನ್ನು ತಯಾರಿಸಲು ಅವರನ್ನು ಬೆಂಬಲಿಸಿ.

■ **ಕರಡು:** ಒಂದು ಕಲ್ಪನೆಯನ್ನು ಗುರುತಿಸಿದ ನಂತರ ಮತ್ತು ಅದನ್ನು ಆಲೋಚಿಸಿದ ನಂತರ ಮಕ್ಕಳು ತಮ್ಮ ಮೊದಲ ಕರಡನ್ನು ಬರೆಯಬಹುದು. ಮೊದಲ ಕರಡು ಕೊನೆಯದಲ್ಲ ಮತ್ತು

ಸುಧಾರಣೆಗೆ ಯಾವಾಗಲೂ ಅವಕಾಶವಿದೆ. ಕಾಮೆಂಟ್‌ಗಳು ಮತ್ತು ಪ್ರತಿಕ್ರಿಯೆಯ ನಂತರ ಮೊದಲ ಕರಡುಗಳನ್ನು ಪುನಃ ಬರೆಯುವುದು ಒಂದು ಕೌಶಲ್ಯವಾಗಿದ್ದು ಅದನ್ನು ಮೊದಲೇ ಕಲಿಸಬೇಕು.

- **ಪರಿಷ್ಕರಿಸುವುದು:** ಮಕ್ಕಳು ತಮ್ಮ ಆರಂಭಿಕ ಕರಡುಗಳ ಬಗ್ಗೆ ಶಿಕ್ಷಕರು ಮತ್ತು ಗೆಳೆಯರಿಂದ ಪ್ರತಿಕ್ರಿಯೆ ಪಡೆಯಬಹುದು. ಮಕ್ಕಳು ತಮ್ಮ ಕರಡುಗಳನ್ನು ಪರಸ್ಪರ ಹಂಚಿಕೊಳ್ಳಲು ಗೌರವ ಮತ್ತು ಬೆಂಬಲದ ವಾತಾವರಣವಿರಬೇಕು. ಪ್ರತಿಕ್ರಿಯೆಯನ್ನು ಸ್ವೀಕರಿಸಿದ ನಂತರ ಕರಡುಗಳನ್ನು ಪರಿಷ್ಕರಿಸಲು ಅವರಿಗೆ ಹೇಳಿ.

- **ಸಂಪಾದನೆ:** ಸಂಪಾದನೆಯು ವ್ಯಾಕರಣ, ಕಾಗುಣಿತ ಮತ್ತು ವಿರಾಮಚಿಹ್ನೆಯ ತಿದ್ದುಪಡಿಗಳನ್ನು ಮಾಡುವುದರ ಪ್ರಕ್ರಿಯೆಯನ್ನು ಒಳಗೊಂಡಿದೆ. ಸಾಮಾನ್ಯವಾಗಿ ಭಾರತದ ತರಗತಿಗಳು ಸಂಪಾದನೆಯ ಮೇಲೆ ಮಾತ್ರ ಕೇಂದ್ರೀಕರಿಸುತ್ತವೆ. ಈ ಅಂಶವನ್ನು ಪ್ರತ್ಯೇಕವಾಗಿ ಇರಿಸುವ ಮೂಲಕ, ಮಕ್ಕಳು ಬರವಣಿಗೆಯ ಇತರ ಅಂಶಗಳ ಮೇಲೆ ಗಮನಹರಿಸಲು ಅವಕಾಶ ಪಡೆಯುತ್ತಾರೆ.

- **ಹಂಚಿಕೆ:** ವಿಚಾರಮಂಥನದ ಹಂತದಿಂದಲೇ ಮಕ್ಕಳು ತಮ್ಮ ಬರವಣಿಗೆಗಾಗಿ ವಿಚಾರಗಳನ್ನು ಹಂಚಿಕೊಳ್ಳಲು ಪ್ರಾರಂಭಿಸುತ್ತಾರೆ. ಅವರು ತಮ್ಮ ಮೊದಲ ಕರಡುಗಳನ್ನು ಪ್ರತಿಕ್ರಿಯೆಯನ್ನು ಪಡೆಯಲು ಹಂಚಿಕೊಳ್ಳುತ್ತಾರೆ. ಸಂಪಾದನೆಯ ಪ್ರಕ್ರಿಯೆಯು ಸಮಯದಲ್ಲಿ ಪರಿಷ್ಕರಿಸಿದ ಕರಡುಗಳನ್ನು ಅವರು ಮತ್ತೆ ಹಂಚಿಕೊಳ್ಳಬಹುದು, ಗೆಳೆಯರನ್ನು ಒಟ್ಟಿಗೆ ಸಂಪಾದಿಸಲು ಪ್ರೋತ್ಸಾಹಿಸಿದಾಗ. ಅಂತಿಮ ಕರಡುಗಳು ಸಿದ್ಧವಾದಂತೆಯೇ. ಮಕ್ಕಳು ತಮ್ಮ ಬರವಣಿಗೆಯನ್ನು ಪ್ರಕಟಿಸುವುದಕ್ಕಾಗಿ (ಸಾರ್ವಜನಿಕಗೊಳಿಸುವುದು) ಅವನ್ನು ಹಂಚಿಕೊಳ್ಳಬಹುದು. ಮಕ್ಕಳು ತರಗತಿಯಲ್ಲಿ ಹೇಗೆ ಪ್ರಕಟಿಸಬಹುದು? ನೀವು ಹಂಚಿಕೊಳ್ಳುವ ಸಮಯವನ್ನು ಆಯೋಜಿಸಿದಾಗ ಮಕ್ಕಳು ಪೂರ್ಣಗೊಂಡ ತುಣುಕುಗಳನ್ನು ಪರಸ್ಪರ ಓದುತ್ತಾರೆ. ತರಗತಿಯ ಪ್ರಕಟಣಾ ಫಲಕದ ಮೇಲೆ ಅವರ ಬರವಣಿಗೆಯನ್ನು ಹಾಕಬಲ್ಲರು. ಅವರ ಬರವಣಿಗೆಯ ಉತ್ತಮ ತುಣುಕುಗಳು ಇರುವಂಥ ಒಂದು ತರಗತಿಯ ಪುಸ್ತಕವನ್ನು ಸೃಷ್ಟಿಸಲು ನೀವು ಸಹಾಯ ಮಾಡಬಹುದು. ಅವರ ತರಗತಿಯ ಒಳಗೆ ಮತ್ತು ಹೊರಗಿನ ವ್ಯಕ್ತಿಗಳೊಂದಿಗೆ ಮಕ್ಕಳು ತಮ್ಮ ಬರವಣಿಗೆಯನ್ನು ಹಂಚಿಕೊಳ್ಳಲು ಪ್ರೋತ್ಸಾಹಿಸಲು ಹಲವು ಮಾರ್ಗಗಳಿವೆ.

ಈ ಪ್ರಕ್ರಿಯೆಯನ್ನು ಬರವಣಿಗೆ ಚಕ್ರ ಎಂದು ಕರೆಯುತ್ತಾರೆ. ಏಕೆಂದರೆ, ಮಕ್ಕಳು ಹಂತಗಳ ಮೂಲಕ ಹಿಂದಕ್ಕೆ ಮತ್ತು ಮುಂದಕ್ಕೆ ಸುತ್ತಬಹುದು. ಇದು ಒಂದರ ನಂತರ ಒಂದರಂತೆ ಆಗುವ ಅಗತ್ಯವಿಲ್ಲ. ಉದಾಹರಣೆಗೆ, ಕರಡು ಸಮಯದಲ್ಲಿ ತನ್ನ ಬರವಣಿಗೆ ಸರಿಯಾಗಿಲ್ಲ ಎಂದು ಒಂದು ಮಗುವಿಗೆ ಅನಿಸಬಹುದು ಮತ್ತು ವಿಚಾರಮಂಥನಕ್ಕೆ ಹಿಂತಿರುಗಬಹುದು, ಅಥವಾ ಒಂದು ಮಗುವಿಗೆ ಕರಡು ಸಮಯದಲ್ಲಿ ಪ್ರತಿಕ್ರಿಯೆ ಆಗಬಹುದು ಮತ್ತು ತಕ್ಷಣವೇ ಪರಿಷ್ಕರಿಸಲು ಪ್ರಾರಂಭಿಸಬಹುದು. ಮಕ್ಕಳಿಗೆ ಹಂತಗಳಲ್ಲಿ ಒಳಗೆ ಮತ್ತು ಹೊರಗೆ ತಿರುಗುವಂಥ ಸರಾಗತೆಯನ್ನು ನೀಡಬೇಕು. ಒಂದು ಮಗು ಪ್ರಾರಂಭಿಸುವ ಎಲ್ಲ ತುಣುಕುಗಳನ್ನು ಕರಡು ಮತ್ತು ಪ್ರಕಟಣೆ ಮಾಡಬೇಕಿಲ್ಲ, ಮಗು ನಿಜವಾಗಿಯೂ ಕಾಳಜಿ ವಹಿಸುವಂತಹವುಗಳನ್ನು ಮಾತ್ರ ಪ್ರಕಟಿಸಬಹುದು.

**ಮಕ್ಕಳ ಬರವಣಿಗೆಯನ್ನು ಹಂಚಿಕೊಳ್ಳುವುದಕ್ಕಾಗಿ ಸಮಯ ಇಟ್ಟಾಗ, ಅಥವಾ ಅವರ ಗೆಳೆಯರಿಗಾಗಿ ತಮ್ಮ ಬರವಣಿಗೆಗಳನ್ನು ಅವರು ಓದಿದಾಗ, ಅವರಿಗೆ ಸಿಗುವ ಪ್ರತಿಕ್ರಿಯೆಯು ಬಹಳ ಮುಖ್ಯವಾದುದು. 'ನೀನು ಇಲ್ಲಿ ಏನು ಹೇಳಲು ಪ್ರಯತ್ನಿಸುತ್ತಿದ್ದೀಯ ಎಂದು ನಮಗೆ ಅರ್ಥವಾಗುತ್ತಿಲ್ಲ', ಅಥವಾ 'ನೀನು ನಿನ್ನ ಎಲ್ಲ ವಾಕ್ಯಗಳನ್ನು 'ಇದಾದ ಮೇಲೆ' ಎಂದು ಪ್ರಾರಂಭಿಸುತ್ತಿದ್ದೀಯ ('ಆಮೇಲೆ, ಆಮೇಲೆ' ಕನ್ನಡದಲ್ಲಿ)– ಇದು ತಮಾಷೆಯಾಗಿ ತೋರುತ್ತದೆ' ಎಂದೆಲ್ಲ ಅವರ ಸ್ನೇಹಿತರು ಹೇಳುವುದು ಮಕ್ಕಳಿಗೆ ಮುಖ್ಯವಾಗುತ್ತದೆ (ಚಟರ್ಜಿ, 2019).**

## ಭಾಗ ಬಿ:
## ತರಗತಿಕೋಣೆಗಳಲ್ಲಿ ಬರವಣಿಗೆಯನ್ನು ಬೆಂಬಲಿಸುವುದು

### 1. ಉದಯೋನ್ಮುಖ ಬರಹಗಾರರಿಗೆ ಬರವಣಿಗೆಯನ್ನು ಪರಿಚಿತಗೊಳಿಸುವುದು ಮತ್ತು ಹಿತಕರವಾಗಿಸುವುದು

**(ಅ) ಬರವಣಿಗೆಯ ಮೂಲೆಯ ರಚನೆ:**

ಮಕ್ಕಳು ಪೆನ್ಸಿಲ್, ಕಾಗದ ಮತ್ತು ಬಣ್ಣಗಳನ್ನು ತೆಗೆದುಕೊಳ್ಳಬಹುದಾದಂಥ ಬರವಣಿಗೆಯ ಮೂಲೆಯನ್ನು ಹೊಂದಲಿ. ತರಗತಿ ಕೋಣೆಯು ಚಿಕ್ಕದಾಗಿದ್ದರೆ ಇದಕ್ಕಾಗಿ ಒಂದು ಸ್ಥಿರವಾದ ಸ್ಥಳವನ್ನು ಹೊಂದಿರುವುದು ಮುಖ್ಯವಲ್ಲ. ಬರೆಯುವ ಮೂಲೆಯು ಶಿಕ್ಷಕರು ಮಕ್ಕಳನ್ನು ಒಟ್ಟುಗೂಡಿಸುವ ಮತ್ತು ಚಿತ್ರಬಿಡಿಸಲು, ಅಚ್ಚು ಮಾಡಲು ಅಥವಾ ಬರೆಯಲು ಕಾಗದ, ಪೆನ್ಸಿಲ್, ಬಣ್ಣಗಳು ಮತ್ತು ಅಚ್ಚುಗಳನ್ನು ನೀಡುವ ಯಾವುದೇ ಸ್ಥಳವಾಗಿದೆ.

**(ಬ) ಹೇಳಿ ಬರೆಸಿದ ಕಥೆಗಳು:**

ಮಕ್ಕಳು ಬಯಸಿದರೆ ಗೀಚಿ ಗೆರೆಯೆಳೆಯಲು ಅಥವಾ ಚಿತ್ರ ಬರೆಯಲು ಅವಕಾಶ ಮಾಡಿಕೊಡಿ. ಒಮ್ಮೆ ಅವರು ಮಾಡಿದ ನಂತರ, ಅವರು ಏನು ಬರೆದರೆಂದು ಅವರನ್ನು ಕೇಳಿರಿ. ಅವರು ಹೇಳಿದ್ದನ್ನು ಬರೆಯಿರಿ ಮತ್ತು ಈ ಹೇಳಿಬರೆಯಿಸಿದ ಬರಹಗಳನ್ನು ಅದರ ಚಿತ್ರಗಳ ಜೊತೆಯಲ್ಲಿ ತರಗತಿಯಲ್ಲಿ ಪ್ರದರ್ಶಿಸಿ. ಮಗುವಿಗೆ ಅವರ ಬರವಣಿಗೆಗೆ ಬೆಲೆಯಿದೆ ಮತ್ತು ಅವರು ಬರೆಯುವುದನ್ನು ಇತರರು ಓದಬಹುದು ಎಂಬುದನ್ನು ಅರ್ಥಮಾಡಿಕೊಳ್ಳಲು ಇದು ಸಹಾಯ ಮಾಡುತ್ತದೆ. ಚಿತ್ರ 7ರಲ್ಲಿ ಒಬ್ಬ ಪೋಷಕರು ತನ್ನ ಮಗಳು ಆಕೆಗೆ ಹೇಳಿದ ಕಥೆಯನ್ನು ಬರೆದಿದ್ದಾರೆ ಮತ್ತು ಅದನ್ನು ವಿವರಿಸಲು ಸಹಾಯ ಮಾಡಿದ್ದಾರೆ. ಸಾಮಾನ್ಯವಾಗಿ ಮಕ್ಕಳಿಗೆ ಅವರ ಕಥೆಗಳನ್ನು ವಿವರಿಸಲು ಪ್ರೋತ್ಸಾಹಿಸಬೇಕು; ಆದರೆ ಕೆಲವೊಮ್ಮೆ ಬರೆಯಲು ಅಥವಾ ಚಿತ್ರಬಿಡಿಸಲು ಅವರಿಗೆ ಇರುವ ಅನಾಸಕ್ತಿಯನ್ನು ನಿವಾರಿಸಲು ವಯಸ್ಕರು ಅವರಿಗೆ ಮಾದರಿ ಚಟುವಟಿಕೆಗಳನ್ನು ಮಾಡಬಹುದು.




**ಚಿತ್ರ 7: ಹೇಳಿಬರೆಸಿದ ಕಥೆ.** ಚಿತ್ರ ಸೌಜನ್ಯ: ಶೈಲಜ ಮೆನನ್

**(ಕ) ಹಂಚಿಕೊಳ್ಳುವುದು:**

ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಬರವಣಿಗೆಯನ್ನು ಹಂಚಿಕೊಳ್ಳುವ ಚಟುವಟಿಕೆಗಳನ್ನು ನೀವು ರೂಪಿಸಬಹುದು. ಉದಾಹರಣೆಗೆ, ತರಗತಿಯವರೆಲ್ಲ ಒಟ್ಟಿಗೆ ಕಥೆಯನ್ನು ಓದಬಹುದು ಮತ್ತು ತದನಂತರ ಪರ್ಯಾಯ ಮುಕ್ತಾಯಗಳನ್ನು ಚರ್ಚಿಸಬಹುದು. ನಂತರ ಶಿಕ್ಷಕರು ವಿದ್ಯಾರ್ಥಿಗಳು ಹೇಳಿದಂತೆ ಹೊಸ ಮುಕ್ತಾಯದ ಜೊತೆಗೆ ಕಥೆಯನ್ನು ಪುನಃ ಬರೆಯಬಹುದು. ಹಾಗೆಯೇ, ತರಗತಿಯ ಕೆಲವು ಚಟುವಟಿಕೆಗಳನ್ನು ಒಟ್ಟಿಗೆ ಜೊತೆಯಲ್ಲಿ ಮಾಡಿರಬಹುದು. ಅವರು ಕಾಲ್ನಡಿಗೆ ಹೋಗಿರಬಹುದು ಮತ್ತು ಆಸಕ್ತಿದಾಯಕವಾದದ್ದನ್ನು ಗಮನಿಸಿರಬಹುದು. ಅವರ ಅನುಭವವನ್ನು ಚರ್ಚಿಸಿದ ಮೇಲೆ ಅವರು ಒಟ್ಟಾಗಿ ಬರವಣಿಗೆಯ ತುಣುಕನ್ನು ರಚಿಸಬಹುದು. ಅದನ್ನು ಬರೆಯುವ ಜವಾಬ್ದಾರಿಯನ್ನು (ಕಪ್ಪು ಹಲಗೆ ಅಥವಾ ಚಾರ್ಟ್ ಪೇಪರ್ ಮೇಲೆ) ಶಿಕ್ಷಕರು ತೆಗೆದುಕೊಳ್ಳಬಹುದು, ಆದರೆ ಮಕ್ಕಳು ಸಹಾ ಕೆಲವು ಭಾಗಗಳನ್ನು ಬರೆಯಬಹುದು. ಕೆಲವು ಮಕ್ಕಳು ಸಂಪೂರ್ಣ ಪದಗಳನ್ನು ನೀಡುವುದರಲ್ಲಿ ಸಫಲರಾದರೆ ಹಾಗೆಯೇ ಇತರರು ಒಂದು ಅಕ್ಷರವನ್ನು ಮಾತ್ರ ಬರೆಯಬಹುದು.

**(ಡ) ಲಿಖಿತ ಸಂಭಾಷಣೆಗಳು:**

ಮೌಖಿಕ ಸಂಭಾಷಣೆಗಳನ್ನು ಬರೆಯಬಹುದೆಂದು ಚಿಕ್ಕಮಕ್ಕಳನ್ನು ಪ್ರೋತ್ಸಾಹಿಸಬಹುದು. 30 ರಿಂದ 40 ವಿದ್ಯಾರ್ಥಿಗಳೊಂದಿಗೆ ಕೆಲಸ ಮಾಡುವ ಶಿಕ್ಷಕನಿಗೆ ಎಲ್ಲ ವಿದ್ಯಾರ್ಥಿಗಳೊಂದಿಗೆ ಒಬ್ಬೊಬ್ಬರಿಗೇ ಇದನ್ನು ಮಾಡಲು ಸಾಧ್ಯವಿಲ್ಲ. ಆದರೆ ಒಬ್ಬ ವಿದ್ಯಾರ್ಥಿಯೊಂದಿಗೆ ಇದನ್ನು ಮಾದರಿ ಮಾಡಿ ನಂತರ ಇಡೀ ತರಗತಿಗೆ ಶಿಕ್ಷಕಿಯು ತೋರಿಸಬಹುದು ಮತ್ತು ನಂತರ ಕಾಗದ ಮತ್ತು ಪೆನ್ಸಿಲ್ ಬಳಸಿ (ಫೋನ್ ನಲ್ಲಿ ಅಲ್ಲ!) ಗೆಳೆಯರು ಹರಟೆ ಹೊಡೆಯಬಹುದು.

ಚಿತ್ರ 8– ಒಬ್ಬ ಪೋಷಕಿ ಮತ್ತು ಆಕೆಯ 7 ವರ್ಷದ ಮಗಳ ನಡುವಿನ ಸಂಭಾಷಣೆಯನ್ನು ತೋರಿಸುತ್ತದೆ.

ಬೆಳಿಗ್ಗೆ ಸ್ವಲ್ಪ ಹುಷಾರಿಲ್ಲದ ಸೋದರಿಯೊಂದಿಗೆ ಮನೆ ಬಿಟ್ಟ ಅವಳ 7 ವರ್ಷದ ಮಗಳು ಆಗತಾನೆ ಹಿಂದಿರುಗಿರುತ್ತಾಳೆ. ಮಗುವು ತನ್ನ ದಿನದ ಬಗ್ಗೆ ಅವಳ ಸೋದರಿ ಆರೋಗ್ಯದ ಬಗ್ಗೆ ಸಹ ಸೇರಿಸಿಕೊಂಡು ಹರುಷದಿಂದ ಉತ್ಸುಕಳಾಗಿದ್ದು ಸ್ಪಷ್ಟವಾಗಿದೆ. ಈ ಚಿತ್ರದಲ್ಲಿ ತೋರಿಸಿರುವಂತೆ ತಾಯಿಯು Caterpiler, Rock ಮತ್ತು For ಪದಗಳ ಕಾಗುಣಿತ ತಪ್ಪಿದ್ದರೂ ಮಗಳ ತಪ್ಪುಗಳನ್ನು ತಿದ್ದುವ ಹಾಗೆ ತೋರಿಸಿಕೊಳ್ಳದೆ ಆ ಪದಗಳನ್ನು ಸರಿಯಾದ ಕಾಗುಣಿತದೊಂದಿಗೆ ಬರೆದಿರುವುದನ್ನು ನೀವು ನೋಡಬಹುದು. ಮಗುವಿನ ಕೈಬರಹ ಮತ್ತು ಕಾಗುಣಿತವೆರಡೂ ಪರಿಪೂರ್ಣವಾಗಿಲ್ಲ. ಮಗುವಿಗೆ ಅದರದ್ದೇ ಬುದ್ಧಿ – ಆ ಕಲ್ಲಿಗೆ ‘Caterpiler Rock ’ ಎಂದು ಕರೆಯಲು ತಾಯಿಯು ಸಲಹೆ ಇತ್ತರೂ ಮಗುವು ಅದಕ್ಕೆ ‘No name rock’ ಎನ್ನುತ್ತಾಳೆ. ಮೊದಲ ಎರಡು ಸಲ ತಪ್ಪು ಕಾಗುಣಿತವನ್ನು ಬರೆದ ಮಗುವು ನಂತರ ತಾಯಿ ಬರೆದಿದ್ದನ್ನು ನೋಡಿ ‘Rock’ ಅನ್ನು ಸರಿಯಾಗಿ ಬರೆಯುತ್ತಾಳೆ.




**ಚಿತ್ರ 8 : ಲಿಖಿತ ಸಂಭಾಷಣೆಗಳು**. ಚಿತ್ರ ಸೌಜನ್ಯ: ಶೈಲಜಾ ಮೆನನ್

## 2. ಪ್ರಾಥಮಿಕ ತರಗತಿಗಳಲ್ಲಿ ಪ್ರಕಾರಗಳು ಮತ್ತು ತಂತ್ರಗಳು

ಬರವಣಿಗೆಯ ವಿವಿಧ ಪ್ರಕಾರಗಳಲ್ಲಿ ಮಕ್ಕಳಿಗೆ ಅಭ್ಯಾಸವನ್ನು ನೀಡಿ, ಪ್ರಾಥಮಿಕ ತರಗತಿಗಳಲ್ಲಿ ನೀವು ಕಲಿಸಬಹುದಾದ ಬರವಣಿಗೆಯ ಪ್ರಕಾರಗಳ ಕೆಲವು ಉದಾಹರಣೆಗಳು ಇಲ್ಲಿವೆ.

a. **ನಿರೂಪಣಾತ್ಮಕ ಬರವಣಿಗೆ:** ಕಿರಿಯ ಬರಹಗಾರರಿಗೆ ಕಥೆಗಳಿಗೆ ಆರಂಭ, ಮಧ್ಯಭಾಗ ಮತ್ತು ಮುಕ್ತಾಯ ಇರುತ್ತದೆ ಎನ್ನುವುದನ್ನು ಕಲಿಸಬಹುದು. ಒಂದು ಕಥೆಯನ್ನು ಕೇಳಿಸುವಂತೆ ಓದಿದ ಮೇಲೆ, ನೀವು ಮೂರು ಬೋಗಿಗಳಿರುವ ರೈಲನ್ನು ಬರೆಯಬಹುದು. ಮಕ್ಕಳ ಜೊತೆ ಕಥೆಯನ್ನು ಚರ್ಚಿಸಿರಿ, ಕಥೆಯ ಯಾವ ಭಾಗ ಯಾವ ಬೋಗಿಗೆ ಹೋಗಬೇಕು (ಆರಂಭ, ಮಧ್ಯಭಾಗ, ಮುಕ್ತಾಯ) ಎಂದು ಅವರನ್ನು ಕೇಳಿರಿ. ಹಲವಾರು ಕಥೆಗಳನ್ನು ಈ ರೀತಿಯಾಗಿ ಚರ್ಚಿಸಿದ ಮೇಲೆ ವಿದ್ಯಾರ್ಥಿಗಳಿಗೆ 3 ಭಾಗವಾಗಿ ಮಡಚಿದ ಒಂದು ಕಾಗದದ ಹಾಳೆಯನ್ನು ನೀಡಬಹುದು. ಆರಂಭ, ಮಧ್ಯಭಾಗ, ಮತ್ತು ಮುಕ್ತಾಯ ಎಂದು ಬರೆದ ಹಾಳೆಗಳ ಮೇಲೆ ಆರಂಭ, ಮಧ್ಯಭಾಗ ಮತ್ತು ಮುಕ್ತಾಯ ಇರುವಂಥ ಒಂದು ಕಥೆಯನ್ನು ಬರೆಯಲು ಅವರಿಗೆ ಹೇಳಿ ಮತ್ತು ಅವುಗಳನ್ನು ಆಯಾ ಹಾಳೆಗಳ ಮೇಲೆ ಬರೆಯಲು ಹೇಳಿ. ಚಿತ್ರ 3 ಮತ್ತು 7ರಲ್ಲಿ ಇದನ್ನು ಮಾಡುವ ವಿವಿಧ ರೀತಿಗಳನ್ನು ತೋರಿಸಿದೆ.

b. **ವೈಯಕ್ತಿಕ ನಿರೂಪಣೆಗಳು:** ಮಕ್ಕಳಿಗೆ ಅವರ ಅನುಭವಗಳ ಬಗ್ಗೆ ಅವರು ಒಂದು ಕಥೆಯನ್ನು ಬರೆಯಬಹುದು ಎನ್ನುವುದನ್ನು ತೋರಿಸಿ. ಲೇಖಕನ ಅನುಭವದ ಬಗ್ಗೆ ಇರುವ ಒಂದು ಕಥೆಯನ್ನು ನೀವು ಅವರಿಗೆ ಓದಬಹುದು ಅಥವಾ ನಿಮ್ಮ ಜೀವನದ ಒಂದು ಕಥೆಯನ್ನು ನೀವು ಅವರಿಗೆ ಹೇಳಬಹುದು. ಈ ಪ್ರಕ್ರಿಯೆಯನ್ನು ಒಂದು ಸಲ ಮಾದರಿಯಾಗಿ ತೋರಿಸಿದ ನಂತರ, ಅವರ ಜೀವನದ ಮುಖ್ಯವಾದ ಅಥವಾ ಕುತೂಹಲಕಾರಿಯಾದ ಕಥೆಯೊಂದನ್ನು ಹೆಕ್ಕಿ ತೆಗೆಯಲು ಅವರಿಗೆ ಹೇಳಿ ಮತ್ತು ಒಬ್ಬ ಜೊತೆಗಾರರಿಗೆ ಅದನ್ನು ಹೇಳಲು ತಿಳಿಸಿ. ಆವರು ಬರೆಯಬೇಕೆಂದುಕೊಂಡ ಕಥೆಗಳು ತಿಳಿಯುತ್ತಿದ್ದಂತೆ ಅದನ್ನು ಬರೆಯಲು ಅವರು ಪ್ರಾರಂಭಿಸಬಹುದು. ಈ ಪ್ರಕ್ರಿಯೆಯು ಸಂಪೂರ್ಣವಾಗಲು ಸ್ವಲ್ಪ ಸಮಯ ತೆಗೆದುಕೊಳ್ಳಬಹುದು, ಪರಿಷ್ಕರಣೆಗೆ ಮತ್ತು ಪುನಃ ರಚಿಸಲು ನಿಮ್ಮೊಂದಿಗೆ ಮತ್ತು ಅವರ ಗೆಳೆಯರೊಂದಿಗೆ ಸಾಕಷ್ಟು ಸಮಾಲೋಚನೆ ಮಾಡಬೇಕಾಗಬಹುದು. ಆದರೆ ಮಕ್ಕಳು ಅವರ ಜೀವನದ ಬಗ್ಗೆ ಬರೆದುಕೊಂಡಿದ್ದಕ್ಕೆ ಹೆಮ್ಮೆ ಪಡುತ್ತಾರೆ ಮತ್ತು ಹಂಚಿಕೊಳ್ಳಲು ಉತ್ಸುಕರಾಗುತ್ತಾರೆ.

c. **ಸಂಭಾಷಣೆಗಳನ್ನು ಸೇರಿಸುವುದು:** ನೀವು, ಅವರ ಬರವಣಿಗೆಯ ಒಂದು ತುಣುಕನ್ನು ಆರಿಸಿಕೊಂಡು, ಹೆಚ್ಚಿನ ಸಂಭಾಷಣೆಗಳೊಂದಿಗೆ ಅದನ್ನು ಮತ್ತೆ ಬರೆಯಲು ಮಕ್ಕಳಿಗೆ ಹೇಳಬಹುದು. ಇದಕ್ಕಾಗಿ ಸಂಭಾಷಣೆಗಳನ್ನು ಹೇಗೆ ಬರೆಯಬೇಕು ಎಂಬುದರ ಮಾದರಿಯನ್ನು ನೀವು ತೋರಿಸಬೇಕು ಮತ್ತು ಅದು ಕಥೆಯನ್ನು ಏಕೆ ಹೆಚ್ಚು ಅಸಕ್ತಿಕರವಾಗಿಸುತ್ತದೆ ಎಂಬುದನ್ನು ವಿವರಿಸಬೇಕು. ತರಗತಿಯ ಒಂದು ಪ್ರಾಜೆಕ್ಟ್ ಆಗಿ ಪಠ್ಯಪುಸ್ತಕದಿಂದ ಕಥೆಯನ್ನು ತೆಗೆದುಕೊಂಡು ಅದನ್ನು ಸಂಭಾಷಣೆಗಳಿಂದ ತುಂಬಿದ ನಾಟಕವನ್ನಾಗಿ ನೀವು ಮಾಡಿಸಬಹುದು.

d. **ಕಿರುಕ್ಷಣದ ಬರವಣಿಗೆ:** ಕಥಾವಸ್ತುವನ್ನು ನಿಮಗೆ ಹೇಳುವ ಉತ್ಸುಕತೆಯಲ್ಲಿ ಚಿಕ್ಕಮಕ್ಕಳು ವಿವರಗಳ ಮೂಲಕ ವೇಗವಾಗಿ ಸಾಗುತ್ತಾರೆ-ಯಾರು, ಏನು, ಎಲ್ಲಿ, ಯಾವಾಗ. ಆದರೆ ಆ ವಿಧದ ಬರಹವು ಓದಲು ಆಸಕ್ತಿದಾಯಕವಾಗಿರುವುದಿಲ್ಲ. ಆದ್ದರಿಂದ ಅವರಿಗೆ ನಿಧಾನಿಸುವುದನ್ನು ಮತ್ತು ಕಿರುಕ್ಷಣಗಳನ್ನು ನಿಜವಾಗಿಯೂ ಚೆನ್ನಾಗಿ ವಿವರಿಸುವುದನ್ನು ಕಲಿಸುವುದು ಬಹಳ ಮುಖ್ಯ. ಅವರ ವೈಯಕ್ತಿಕ ನಿರೂಪಣೆಗೆ ಹಿಂತಿರುಗಲು (ಹಿಂದೆ ವಿವರಿಸಿದೆ) ಅವರನ್ನು ನೀವು ಕೇಳಬಹುದು, ಅದರಲ್ಲಿ ಒಂದು ಸಣ್ಣ ಕ್ಷಣವನ್ನು ತೆಗೆದುಕೊಳ್ಳಿ ಮತ್ತು ಆ ಕ್ಷಣದ ಬಗ್ಗೆ ಆಳವಾಗಿ ಬರೆಯಿರಿ. ಉದಾಹರಣೆಗೆ, ಒಬ್ಬ ಆರು ವರ್ಷದ ಹುಡುಗಿಯು ಅವಳ ಅಜ್ಜಿಯ ಕಾಯಿಲೆಯ (ಇದು ಹಲವಾರು ವಾರಗಳ ಕಾಲ ನಡೆಯಿತು) ಬಗ್ಗೆ ಬರೆಯಲು ಬಯಸಿದ್ದಳು. ಒಂದು ಸಣ್ಣ ಕ್ಷಣವನ್ನು ಆಯ್ಕೆಮಾಡಲು ಕೇಳಿದಾಗ, ಅಜ್ಜಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಿದ್ದು ಮತ್ತು ಆಗ ಅಜ್ಜಿಯು ತಾನೇ ಸ್ವತಃ ಹಾಸಿಗೆಯಿಂದ ಎದ್ದೇಳಲು ಆಗದಿದ್ದಂತಹ ಸಮಯವನ್ನು ಅವಳು ಆಯ್ಕೆ ಮಾಡಿದ್ದಳು. ಅವಳ ತಂದೆ ಮತ್ತು ತಾಯಿಯು ಅಜ್ಜಿಗೆ ಸಹಾಯ ನೀಡಬೇಕಿತ್ತು, ಅವರ ತಲೆ ಹಿಂದಕ್ಕೆ ಹೊರಳುತ್ತಿತ್ತು ಕಾಲುಗಳ ಚಲನೆ ಇರಲಿಲ್ಲ. ತನ್ನ ಅಜ್ಜಿಯು ಹಾಸಿಗೆಯಿಂದ ಮುಂಬಾಗಿಲವರೆಗೆ ಬರಲು ಎಷ್ಟು ಸಮಯ ತೆಗೆದುಕೊಂಡಳು ಮತ್ತು ಅಜ್ಜಿಯು ತಾನು ಹೇಗೆ ಬೀಳುತ್ತೇನೆ ಎಂದುಕೊಂಡಳು ಎನ್ನುವುದನ್ನು ಆ ಪುಟ್ಟ ಹುಡುಗಿಯು ಬರೆದಳು. ಅವಳು ತನ್ನ ಅಜ್ಜಿಯ ಜೊತೆ ಕಾರಲ್ಲಿ ಹೋಗಬೇಕೆಂದುಕೊಂಡಿದ್ದಳು, ಆದರೆ ಅವಳ ತಂದೆತಾಯಿಗಳು ಅವಳನ್ನು ಮನೆಯಲ್ಲೆ ಇರಲು ಹೇಳಿದ್ದರು. ಈ ಹಿಂದಿನ ಬರವಣಿಗೆಯ ತುಣುಕಿನಲ್ಲಿ ಈ ಎಲ್ಲ ವಿವರಗಳು ಅಥವಾ ಅವಳ ಭಾವನೆಗಳು ಗೋಚರವಾಗಿರಲಿಲ್ಲ, ಆದರೆ ಈ ಎಲ್ಲ ವಿವರಗಳೇ ಬರವಣಿಗೆಯ ತುಣುಕನ್ನು ಓದುಗರಿಗೆ ಶಕ್ತಿಯುತ ಮತ್ತು ಆಸಕ್ತಿದಾಯಕವಾಗಿಸುತ್ತದೆ. ಸರಿಯಾದ ಕಾಗುಣಿತ ಬರದ ಇನ್ನೂ ಬಹಳ ಕಿರಿಯ ಬರಹಗಾರರೂ ಈ ರೀತಿಯ ವಿವರಗಳ ಬಗ್ಗೆ ಯೋಚಿಸಬಲ್ಲರು ಮತ್ತು ಅವನ್ನು ಅವರೇ ಸೃಷ್ಟಿಸಿದ ಕಾಗುಣಿತ ಮತ್ತು ಚಿತ್ರಗಳ ಮೂಲಕ ವ್ಯಕ್ತಪಡಿಸಬಲ್ಲರು.

e. **ಪಟ್ಟಿಗಳು, ಟಿಪ್ಪಣಿಗಳು ಮತ್ತು ಲೇಬಲ್‌ಗಳನ್ನು ತಯಾರಿಸುವುದು**: ಕ್ರಿಯಾತ್ಮಕ ಉದ್ದೇಶಗಳಿಗಾಗಿ ಸಾಕಷ್ಟು ಬರವಣಿಗೆಯ ಚಟುವಟಿಕೆಗಳನ್ನು ಮಕ್ಕಳಿಗೆ ನೀಡಿರಿ. ಪಟ್ಟಿಗಳು, ಟಿಪ್ಪಣಿಗಳು, ಲೇಬಲ್‌ಗಳು ಮತ್ತು ಪತ್ರಗಳು ದಿನನಿತ್ಯದ ಜೀವನಕ್ಕೆ ಬೇಕಾಗುವ ವಿವಿಧ ಬರವಣಿಗೆಯ ರೂಪಗಳು. ತರಗತಿಯ ಉದ್ದೇಶಗಳಿಗಾಗಿ ಇವನ್ನು ಮಾಡುವಂತೆ ಮಕ್ಕಳಿಗೆ ಹೇಳಿ- ನಿಮ್ಮ ವಾರದ ಕಾರ್ಯಗಳ ಒಂದು ಪಟ್ಟಿಮಾಡಿ, ನಿಮ್ಮ ಹಳೆಯ ಒಂದು ಬರವಣಿಗೆಯ ಕೆಲಸದಲ್ಲಿ ಸಹಾಯಮಾಡಿದ್ದಕ್ಕಾಗಿ ನಿಮ್ಮ ಸ್ನೇಹಿತೆಗೆ

ಧನ್ಯವಾದ ಹೇಳುವ ಒಂದು ಟಿಪ್ಪಣಿಯನ್ನು ಬರೆಯಿರಿ, ನಿಮ್ಮ ತರಗತಿಯ ವಸ್ತುಗಳು ಮತ್ತು ಚಟುವಟಿಕೆಯ ಪ್ರದೇಶಗಳ ಲೇಬಲ್‌ಗಳನ್ನು ಮಾಡಲು ಟೀಚರ್‌ಗೆ ಸಹಾಯ ಮಾಡಿರಿ.

f. **ಪುಸ್ತಕಗಳನ್ನು ರಚಿಸುವುದು:** ಮಕ್ಕಳ ಜೊತೆ ತರಗತಿಯಲ್ಲಿ ಶಿಕ್ಷಕರು ವಿವಿಧ ಪುಸ್ತಕಗಳನ್ನು ರಚಿಸಬಹುದು[4]. ಕಥೆಯ ಪುಟಗಳನ್ನು ಪ್ರತಿಯೊಂದು ಮಗುವು ಒಂದೊಂದು ಪುಟದಂತೆ ಸೃಜಿಸಿದಂಥಹ, ಎಲ್ಲ ಮಕ್ಕಳು ಜೊತೆಗೂಡಿ ಬರೆದಂಥ (ಶೇರ್ಡ್ ಬುಕ್ಸ್) ಪುಸ್ತಕಗಳನ್ನು ಮಕ್ಕಳು ರಚಿಸಬಹುದು. ಪ್ರತಿಮಗುವಿನ ಬಗ್ಗೆ ಒಂದು ಪುಟವನ್ನು ಹೊಂದಿರುವ (ಅವರೇ ಬರೆದು ವಿವರಿಸಿರುವ) ತರಗತಿಯ ಪುಸ್ತಕಗಳನ್ನು ರಚಿಸಬಹುದು ಅಥವಾ ಕಾಗುಣಿತದ ಪುಸ್ತಕಗಳನ್ನು ರಚಿಸಬಹುದು. (ಅದರಲ್ಲಿ ಪ್ರತಿ ಮಗು ವರ್ಣಮಾಲೆಯ ಒಂದು ಅಕ್ಷರವನ್ನು ಬರೆಯುವುದು ಮತ್ತು ವಿವರಿಸುವುದು.)

g. **ವಿವರಣಾತ್ಮಕ ಬರವಣಿಗೆ:** ಚಿಕ್ಕ ಮಕ್ಕಳಲ್ಲಿ ಆಸಕ್ತಿಯನ್ನು ಕೆರಳಿಸುವ ಚಿಕ್ಕ ವಸ್ತುಗಳ ಒಂದು ಸಮೂಹವನ್ನೇ ತರಗತಿಗೆ ತನ್ನಿ, ಉದಾಹರಣೆಗೆ ಸಮುದ್ರದ ಚಿಪ್ಪು, ಒಂದು ಗರಿ, ಗಂಟೆ, ಆಟದ ವಸ್ತು ಅಥವಾ ಒಂದು ಕಲ್ಲು. ತರಗತಿಯ ಮಧ್ಯದಲ್ಲಿ ಒಂದು ಬಟ್ಟೆಯ ಮೇಲೆ ಈ ವಸ್ತುಗಳನ್ನು ಹರಡಿರಿ. ಪ್ರತಿ ವಿದ್ಯಾರ್ಥಿಯನ್ನು ಅವರ ಆಯ್ಕೆಯ ವಸ್ತುವನ್ನು ಹೆಕ್ಕಿಕೊಳ್ಳಲು ಹೇಳಿರಿ. ಮಕ್ಕಳನ್ನು ಜೊತೆಗೂಡಿ, ಆ ವಸ್ತುಗಳ ಬಗ್ಗೆ ಅವರಿಗೆ ಗೊತ್ತಿರುವಷ್ಟು ಹೆಚ್ಚಿನ ವಿವರಗಳನ್ನು ಒಬ್ಬರು ಇನ್ನೊಬ್ಬರಿಗೆ ವಿವರಿಸಲು ಹೇಳಿರಿ. ಇದು ಹೇಗೆ ಕಾಣಿಸುತ್ತದೆ? ಸುತ್ತ ತಿರುಗಿಸಿದಾಗ ಹೇಗೆ ಕಾಣಿಸುತ್ತದೆ? ಅಥವಾ ಮೇಲೆ ಕೆಳಗೆ ಮಾಡಿದಾಗ? ಅಥವಾ ಒಳ ಹೊರಗೆ ಮಾಡಿದಾಗ? ವಿವಿಧ ವಸ್ತುಗಳ ವಿರುದ್ಧ ಅದನ್ನು ಹೊಡೆದಾಗ ಅದು ಹೇಗೆ ಶಬ್ದ ಮಾಡುತ್ತದೆ? ಅದು ಏನು ಅನ್ನಿಸುತ್ತದೆ? ಅದರ ವಾಸನೆ ಹೇಗಿದೆ? ಅವರ ಜೊತೆಗಾರರಿಗೆ ಇದನ್ನು ವಿವರಿಸಿದ ಮೇಲೆ ಆ ವಸ್ತುವಿನ ಚಿತ್ರದ ಜೊತೆಗೆ ಅದರ ವಿವರಣೆಯನ್ನು ಅವರು ಬರೆಯಬಹುದು. ಈ ಚಟುವಟಿಕೆಯು ಯಾವುದರ ಬಗ್ಗೆ ಮಕ್ಕಳು ಬರೆಯುತ್ತಿದ್ದಾರೆ ಎನ್ನುವುದನ್ನು ಅವರು ಹತ್ತಿರದಿಂದ ಗಮನಿಸಲು ಮತ್ತು ಅವರ ಶಬ್ದಕೋಶವನ್ನು ವಿಸ್ತರಿಸಲು ಸಹಾಯ ಮಾಡುತ್ತದೆ.

h. **ಕಾರ್ಯವಿಧಾನದ ಅಥವಾ 'ಹೇಗೆ' ಎಂಬ ಬರವಣಿಗೆ:** ಮಕ್ಕಳನ್ನು ಅವರು ಪರಿಣಿತರಾಗಿರುವಂಥ ಮತ್ತು ಬೇರೆ ಮಕ್ಕಳಿಗೆ ಹೇಳಿಕೊಡಲು ಉತ್ಸಾಹವಿರುವಂಥ ಯಾವುದರ ಬಗ್ಗೆಯಾದರೂ ಬರೆಯಲು ಹೇಳಿರಿ. ಕಾರ್ಯವಿಧಾನದ ಬರವಣಿಗೆಯ ಮೂಲಭೂತ ತತ್ತ್ವಗಳನ್ನು ಕಲಿಸಿರಿ; ಬೇಕಾಗಿರುವ ವಸ್ತುಗಳನ್ನು ಪಟ್ಟಿ ಮಾಡಿ; ಯಾವುದನ್ನಾದರೂ ಹೇಗೆ ಮಾಡಬೇಕೆಂದು ಹಂತ ಹಂತದ ಸೂಚನೆಯನ್ನು ನೀಡಿ. ಅವರು ಸಲಹೆಗಳನ್ನು ಸಹ ನೀಡಬಹುದು. ಉದಾಹರಣೆಗೆ, ಬುಗುರಿಯನ್ನು ಆಡಿಸುವುದು ಹೇಗೆ; ಗಾಳಿಪಟವನ್ನು ಹಾರಿಸುವುದು ಹೇಗೆ; ಬಹಳ ಹೊತ್ತು ಒಂದೇ ಕಾಲಿನ ಮೇಲೆ ಕುಂಟುವುದು ಹೇಗೆ; ನಿಮ್ಮ ಸಹೋದರನನ್ನು ಮರುಳುಗೊಳಿಸುವುದು (ಫೂಲಿಂಗ್) ಹೇಗೆ; ಮುಖವಾಡವನ್ನು ಮಾಡುವುದು ಹೇಗೆ, ಬೇರೆಯವರಿಗೆ ಹೇಳಿಕೊಡಲು ಮಕ್ಕಳು ಉತ್ಸುಕರಾಗಿರುವಂಥ ವಿಷಯಗಳ ಪಟ್ಟಿಯು ಕೊನೆಯಿಲ್ಲದ್ದು. ಚಿತ್ರ 9ರಲ್ಲಿ ಜಿಮ್ನಾಸ್ಟಿಕ್ಸ್ ಕಲಿಯುತ್ತಿರುವ 11 ವರ್ಷದವಳು ಬ್ಯಾಕ್ ಹ್ಯಾಂಡ್ ಸ್ಪ್ರಿಂಗ್ ಅನ್ನು ಹೇಗೆ ಮಾಡುವುದು ಎನ್ನುವುದನ್ನು ವಿವರಿಸಿದ್ದಾಳೆ. ನಂತರದ ಕರಡುಪ್ರತಿಯಲ್ಲಿ ಬೇಕಾಗಿರುವ ಸಾಮಾನು ಹಾಗೂ ಸಹಪಾಠಿಗಳಿಗೆ ಕೆಲವು ಸಲಹೆಗಳನ್ನು ಸೇರಿಸಿಕೊಳ್ಳುವಂತೆ ಅವಳು ಪ್ರೋತ್ಸಾಹಿಸುತ್ತಾಳೆ.

4 4 To learn more about this topic, please see EL Practitioner Brief 7, http://eli.tiss.edu/wp-content/uploads/2017/08/Creating_Books_in_the_Classroom_ELI_Handout_7.pdf




**ಚಿತ್ರ 9: ವಿವರಣಾತ್ಮಕ ಬರವಣಿಗೆಯ ಪ್ರತಿ.** ಚಿತ್ರ ಸೌಜನ್ಯ: ಶೈಲಜ ಮೆನನ್

i. ಪದ್ಯಗಳನ್ನು ಬರೆಯುವುದು: ವಿವಿಧ ಪದ್ಯಗಳನ್ನು ಮಕ್ಕಳಿಗೆ ಪರಿಚಯಿಸಬಹುದು (ಪ್ರಾಸವಿರುವ ಮತ್ತು ಪ್ರಾಸವಿಲ್ಲದಿರುವಂಥ) ಮತ್ತು ಅವರದೇ ಆದ ಸರಳಪದ್ಯಗಳನ್ನು ಬರೆಯಲು ಸಹಾಯಮಾಡಲಾಗುವುದು. ಮಕ್ಕಳು ಪದ್ಯಗಳನ್ನು ರಚಿಸಬೇಕು ಎಂದು ನಿರೀಕ್ಷಿಸುವುದಕ್ಕೆ ಮುಂಚೆ ಶಿಕ್ಷಕರು ವಿವಿಧ ಬಗೆಯ ಪದ್ಯಗಳನ್ನು ಜೋರಾಗಿ ಮಕ್ಕಳಿಗೆ ಓದಬೇಕು ಮತ್ತು ವಿವರಿಸಬೇಕು ಎನ್ನುವುದನ್ನು ಇದು ಹೇಳದೇ ಹೋಗುತ್ತದೆ. ಉದಾಹರಣೆಗೆ, ಚಿತ್ರ 10ರಲ್ಲಿ 8 ವರ್ಷದ ಹುಡುಗಿಯೊಬ್ಬಳು ಇತ್ತೀಚೆಗೆ ಹಂಪಿಗೆ ಭೇಟಿ ನೀಡಿದ್ದನ್ನು 1–2–3–4–1 ಶೈಲಿಯನ್ನು ಉಪಯೋಗಿಸಿ ವಿವರಿಸುತ್ತಾಳೆ (ಮೊದಲ ಸಾಲಿನಲ್ಲಿ 1 ಪದವಿದೆ, ಎರಡನೇ ಸಾಲಿನಲ್ಲಿ 2 ಪದವಿದೆ ಮತ್ತು ಇತ್ಯಾದಿ ಹೀಗೆ...).

j. ಪತ್ರಿಕಾ ಬರವಣಿಗೆ: ವಿದ್ಯಾರ್ಥಿಗಳನ್ನು ದಿನನಿತ್ಯದ ಪತ್ರಿಕೆ ಅಥವಾ ಜರ್ನಲ್ ಅಥವಾ ವೈಯಕ್ತಿಕ ಡೈರಿಯನ್ನು ನಿರ್ವಹಿಸಲು ಪ್ರೋತ್ಸಾಹಿಸಿರಿ, ಅದರಲ್ಲಿ ದಿನನಿತ್ಯದ ಆಗುಹೋಗುಗಳು, ಆಲೋಚನೆಗಳು ಮತ್ತು ಭಾವನೆಗಳನ್ನು ಅವರಿಗಾಗಿಯೇ ಬರೆದುಕೊಳ್ಳಬಹುದು. ಅವರ ಜೀವನವನ್ನು ದಾಖಲಿಸಲು ಮತ್ತು ಪ್ರತಿಬಿಂಬಿಸಲು ಬರವಣಿಗೆಯನ್ನು ಸಾಧನವನ್ನಾಗಿ ಬಳಸುವುದು ಉದ್ದೇಶವಾಗಿದೆ. ಪ್ರತಿದಿನ ಜರ್ನಲ್ ಬರವಣಿಗೆಗೆ ಸಮಯವನ್ನು ಮೀಸಲಿಡಿ. ಮಕ್ಕಳು ಯಾವುದರ ಬಗ್ಗೆ ಅವರು ಬರೆಯಬೇಕೆಂಬುದು ತಿಳಿಯದೇ ಒದ್ದಾಡುತ್ತಿದ್ದರೆ, ಅವರನ್ನು ಸಂಭಾಷಣೆಯಲ್ಲಿ ತೊಡಗಿಸಿಕೊಂಡು ಒಂದು ವಿಷಯವನ್ನು ಗುರುತಿಸಲು ಸಹಾಯ ಮಾಡಿರಿ. ಪ್ರತಿ ಬಾರಿ ಜರ್ನಲ್ ಅನ್ನು ಓದಿ ಮತ್ತು ಪ್ರತಿಕ್ರಿಯೆಯನ್ನು ಹಂಚಿಕೊಳ್ಳಿ.




**ಚಿತ್ರ 10: 8 ವರ್ಷದವಳು ಬರೆದ ಪದ್ಯ,** ಚಿತ್ರ ಸೌಜನ್ಯ: ಶೈಲಜ ಮೆನನ್.

## 3. ಸಾಹಿತ್ಯಕ್ಕೆ ಪ್ರತಿಕ್ರಿಯಿಸಲು ಬರವಣಿಗೆಯನ್ನು ಬಳಸುವುದು:

ಓದುವುದು ಮತ್ತು ಬರೆಯುವುದರ ನಡುವಿನ ಸಂಬಂಧದ ಬಗ್ಗೆ ಈ ಕೈಪಿಡಿಯಲ್ಲಿ ಹಿಂದೆ ಚರ್ಚಿಸಿದ್ದೇವೆ. ಓದುವ ಕ್ರಿಯೆಯು ಬರೆಯುವುದನ್ನು ಉತ್ತಮಗೊಳಿಸುವುದು ಮಾತ್ರವಲ್ಲ, ಬರೆಯುವುದನ್ನು ಮಕ್ಕಳು ಏನನ್ನು ಓದುತ್ತಾರೋ ಅಥವಾ ನೀವು ಏನನ್ನು ಗಟ್ಟಿಯಾಗಿ ಓದಿ ಹೇಳಿರುತ್ತೀರೋ ಅದಕ್ಕೆ ಪ್ರತಿಕ್ರಿಯೆಯ ರೂಪದಲ್ಲಿಯೂ ಬಳಸಿಕೊಳ್ಳಬಹುದು. ಇಲ್ಲಿ ಸಾಹಿತ್ಯಕ್ಕೆ ಪ್ರತಿಕ್ರಿಯೆಯ ರೂಪದಲ್ಲಿ ಬರವಣಿಗೆಯನ್ನು ಬಳಸಿಕೊಳ್ಳುವುದನ್ನು ಉತ್ತೇಜಿಸಲು ಮಕ್ಕಳಿಗೆ ಕೆಲವು ಚಟುವಟಿಕೆಗಳನ್ನು ಸೂಚಿಸಲಾಗಿದೆ:

### (a) ಕಥೆ ಅಥವಾ ಪಾತ್ರದ ನಕ್ಷೆಗಳನ್ನು ರಚಿಸಿ:

**ಕಥೆಯ ನಕ್ಷೆಗಳು:** ಇದನ್ನು ಮುಂಚೆಯೇ ಚರ್ಚಿಸಲಾಗಿದೆ, ಇದರಲ್ಲಿ ಒಂದು ಕಾಗದದ ಹಾಳೆಯಲ್ಲಿ ಕಥಾವಸ್ತುವಿನ ಪ್ರಾರಂಭ, ಮಧ್ಯ ಮತ್ತು ಮುಕ್ತಾಯ ಅಥವಾ ಅಂತ್ಯವನ್ನು ರಚಿಸಲು ಮಕ್ಕಳನ್ನು ಕೇಳಲಾಗುತ್ತದೆ.

**ಪಾತ್ರದ ನಕ್ಷೆಗಳು:** ಒಂದು ಕಾಗದದ ಹಾಳೆಯಲ್ಲಿ ಪಾತ್ರದ ಹೆಸರನ್ನು ಮಧ್ಯದಲ್ಲಿ ಬರೆಯಲು ಮಕ್ಕಳಿಗೆ ಹೇಳಿ. ಅವರು ಪಾತ್ರದೊಂದಿಗೆ ಜೋಡಿಸುವ ವಿಭಿನ್ನ ವ್ಯಕ್ತಿತ್ವದ ಗುಣಲಕ್ಷಣಗಳನ್ನು ಬರೆಯಲು

ದಿಕ್ಸೂಚಿಗಳನ್ನು ಬಳಸಲು ಹೇಳಿರಿ. ಅವರ ಜೊತೆಗಾರರೊಂದಿಗೆ ಪಾತ್ರನಕ್ಷೆಗಳನ್ನು ಹಂಚಿಕೊಳ್ಳಬೇಕು ಮತ್ತು ಅವರು ಪಟ್ಟಿಮಾಡಿದ ಗುಣಲಕ್ಷಣಗಳನ್ನು ಚರ್ಚಿಸಬೇಕು. ಪ್ರತಿಯೊಂದು ವ್ಯಕ್ತಿತ್ವದ ಲಕ್ಷಣವನ್ನು ಕಥೆಯ ಒಂದು ಪುರಾವೆಯಿಂದ ಸಮರ್ಥಿಸಬೇಕು.




**ಚಿತ್ರ 11: ಪಾತ್ರನಕ್ಷೆಯ ಉದಾಹರಣೆಯೊಂದನ್ನು ತೋರಿಸಲಾಗಿದೆ.** ಚಿತ್ರ ಸೌಜನ್ಯ: ದಿವಿ ಸಿಂಗ್.

### b. ಕಥೆಯನ್ನು ಬದಲಾಯಿಸಿ:

ಅವರು ಒಂದು ಕಥೆಯನ್ನು ಓದಿದ ಮೇಲೆ, ಅವರು ಬದಲಾಯಿಸಲು ಬಯಸುವ ಒಂದು ಅಂಶವೇನಾದರೂ ಇದೆಯೇ ಎಂದು ನೀವು ಮಕ್ಕಳನ್ನು ಕೇಳಬಹುದು. ಈ ಬದಲಾವಣೆಯನ್ನು ಸೇರಿಸಿ ಕಥೆಯನ್ನು ಪುನಃ ಬರೆಯುವಂತೆ ಅವರಿಗೆ ತಿಳಿಸಿ. ಈ ಬದಲಾವಣೆಯು ಮುಕ್ತಾಯವನ್ನು ವಿಸ್ತರಿಸುವುದನ್ನು, ಅಥವಾ ಬದಲಾಯಿಸುವುದನ್ನು, ದೃಶ್ಯದ ಬದಲಾವಣೆ ಅಥವಾ ಪಾತ್ರದ ವ್ಯಕ್ತಿತ್ವದ ಗುಣಲಕ್ಷಣಗಳ ಬದಲಾವಣೆಯನ್ನು ಒಳಗೊಂಡಿರಬಹುದು.

### c. ದೃಷ್ಟಿಕೋನ:

ನಿರ್ದಿಷ್ಟ ಕಥೆಯನ್ನು ಯಾರ ದೃಷ್ಟಿಕೋನ ಅಥವಾ ದೃಷ್ಟಿಗನುಗುಣವಾಗಿ ಬರೆಯಲಾಗಿದೆ ಎಂಬುದನ್ನು ಚರ್ಚಿಸಿ. ಬೇರೆ ಪಾತ್ರದ ದೃಷ್ಟಿಗನುಗುಣವಾಗಿ ಬರೆದರೆ ಕಥೆ ಹೇಗಿರಬಹುದೆಂಬುದನ್ನು ಕಲ್ಪಿಸಿಕೊಳ್ಳಿ ಎಂದು ಮಕ್ಕಳಿಗೆ ಹೇಳಿರಿ. ಉದಾಹರಣೆಗೆ ಅನೇಕ ಕಥೆಗಳಲ್ಲಿ ದುಷ್ಟ ಮಲತಾಯಿ ಇರುತ್ತಾಳೆ. ಮಲತಾಯಿಯ ದೃಷ್ಟಿಕೋನದಿಂದ ಬರೆಯಿರಿ ಎಂದು ಮಕ್ಕಳಿಗೆ ಹೇಳಿ. ಈ ತಂತ್ರವನ್ನು ಹೆಚ್ಚಿನ ಕಥೆಗಳಿಗೆ ಅನ್ವಯಿಸಬಹುದು ಏಕೆಂದರೆ ಹೆಚ್ಚಿನ ಕಥೆಗಳನ್ನು ಒಂದು ನಿರ್ದಿಷ್ಟ ಪಾತ್ರದ ದೃಷ್ಟಿಕೋನದಿಂದ ಬರೆಯಲಾಗಿದೆ.

### d. ಲೇಖಕರಿಗೆ ಅಥವಾ ಪಾತ್ರಗಳಿಗೆ ಪತ್ರ ಬರೆಯಿರಿ:

ಕಥೆಯನ್ನು ಓದಿದ ಮೇಲೆ, ಅವರ ಆಲೋಚನೆಗಳು, ಪ್ರಶ್ನೆಗಳು ಅಥವಾ ಅಭಿಪ್ರಾಯಗಳನ್ನು ಲೇಖಕನಿಗೆ ಬರೆಯುವಂತೆ ಮಕ್ಕಳನ್ನು ಕೇಳಿರಿ. ಹಾಗೆಯೇ, ಕಥೆಯ ಒಂದು ಪಾತ್ರಕ್ಕೆ ಪತ್ರಗಳನ್ನು ಬರೆಯುವಂತೆ ಸಹ ನೀವು ಅವರಿಗೆ ಹೇಳಬಹುದು.

## ಉಪಸಂಹಾರ

ಲೇಖಕನ ಅನುಭವಗಳಲ್ಲಿಯೇ ಒಳ್ಳೆಯ ಬರವಣಿಗೆಯು ಬೇರೂರಿದೆ; ಹೀಗೆ, ಶಿಕ್ಷಣತಜ್ಞರಾದ ನಾವು, ಅನುಭವಗಳು ಮತ್ತು ಬರವಣಿಗೆಯ ನಡುವಿನ ಸಂಬಂಧವನ್ನು ನೋಡುವಂತೆ ಮಕ್ಕಳನ್ನು ರೂಪಿಸಬೇಕು. ಈ ಕೈಪಿಡಿಯು ಬರವಣಿಗೆಯನ್ನು ಸಂವಹನ ಮತ್ತು ಅಭಿವ್ಯಕ್ತಿಗೆ ಬಳಸುವ ಕಲ್ಪನೆಯನ್ನು ವಿವರಿಸಲು ಪ್ರಯತ್ನಿಸಿದೆ. ಇದು ಮೂರು ಮುಖ್ಯ ತತ್ತ್ವಗಳನ್ನು ಚರ್ಚಿಸಿದೆ. **ಮೊದಲನೆಯದು,** ಬರವಣಿಗೆಯ ಪ್ರಸ್ತುತತೆಯನ್ನು ಎಳೆಯ ಮಕ್ಕಳ ಮನಸ್ಸಿನಲ್ಲಿ ಸ್ಥಾಪಿಸುವುದು. **ಎರಡನೆಯದು,** ಅವರಿಗೆ ನೀಡಿದ ಕೆಲಸವನ್ನು ಉತ್ತಮವಾಗಿ ಅರ್ಥಮಾಡಿಕೊಳ್ಳಲು, ಅವರ ಬರವಣಿಗೆಯನ್ನು ಮಾತು, ಚಿತ್ರ ಮತ್ತು ಆಟದ ಜೊತೆ ಸಂಯೋಜಿಸಲು ಅನುಮತಿ ನೀಡುವುದು. **ಮೂರನೆಯದು,** ಬರಹಗಾರರಾಗಿ ಕಲಿಯಲು ಮಕ್ಕಳಿಗೆ ಮಾರ್ಗದರ್ಶನ ನೀಡುವುದು.

'ಸ್ವ-ಇಚ್ಛೆ'ಯಿಂದ ಬರೆಯುವ ಸಮಯ ಒಳ್ಳೆಯದಾಗಿದ್ದರೂ, ಮಾರ್ಗದರ್ಶನದ ಮೂಲಕ ಬರೆಯುವ ಸಮಯ ಉತ್ತಮ. ಬರವಣಿಗೆಯ ಕೊನೆಯ ಪ್ರತಿಯ ಮೇಲೆ ಕೇಂದ್ರೀಕರಿಸುವ ಬದಲು, ಮಕ್ಕಳಿಗೆ ಬರವಣಿಗೆಯ ಕಾರ್ಯವಿಧಾನಗಳನ್ನು ಕುರಿತು ಮಾರ್ಗದರ್ಶನ ನೀಡಿ. ವಿವಿಧ ಸಲಹೆಗಳು (ಸೂಚಿಸುವಂಥ ಮತ್ತು ಸಮಗ್ರವಲ್ಲದಂಥ) ಅವರ ಬರವಣಿಗೆಗೆ ಮಾರ್ಗದರ್ಶನವಾಗುವಂತೆ ಸಹ ಮಕ್ಕಳಿಗೆ ಒದಗಿಸಲಾಗಿದೆ. ಈ ಕೆಲವು ಕಲ್ಪನೆಗಳು ಮತ್ತು ಚಟುವಟಿಕೆಗಳನ್ನು ಶಿಕ್ಷಕರು ಅವರ ತರಗತಿಗಳಿಗೆ ಅನ್ವಯಿಸಿಕೊಳ್ಳುತ್ತಾ ಮತ್ತು ಈ ವಿಷಯವನ್ನು ಮತ್ತಷ್ಟು ಅನ್ವೇಷಿಸಲು ಸ್ಫೂರ್ತಿಗೊಳ್ಳುತ್ತಾರೆ ಎಂದು ನಾವು ಭಾವಿಸುತ್ತೇವೆ.

## References


Chatterji, S. (2019, February 20). *Children's Talk and Authentic Writing* [Blog Piece]. Retrieved from http://eli.tiss.edu/childrens-talk-and-writing/

Culham, R. (2003) 6+ 1 Traits of writing. New York: Scholastic Inc.

Fletcher, R., & Portalupi, J. (2001). The Writing Cycle. *Writing workshop. (*pp. 61-71) Portsmouth, NH: Heinemann.